KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಮೇ ೧೪, ೨೦೦೯ (ವೈಶಾಖ ೨೪, ಶಕ ವರ್ಷ ೧೯೩೧) | ಸಂಚಿಕೆ ೨೦ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಕಂದಾಯ ಸಚಿವಾಲಯ**

**ವಿಷಯ:** ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರ ಹುದ್ದೆಯನ್ನು ಜಂಟಿ ಜಿಲ್ಲಾಧಿಕಾರಿಗಳು ಎಂದು ಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:**
1. ಅಧ್ಯಕ್ಷರು, ಕರ್ನಾಟಕ ಆಡಳಿತ ಸೇವೆ ಅಧಿಕಾರಿಗಳ ಸಂಘ (ರಿ), ಬೆಂಗಳೂರು ಇವರ ಮನವಿ ದಿನಾಂಕ: 27.6.2008.
2. ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆ, ಮೈಸೂರು ಇವರ ಪತ್ರದ ಸಂಖ್ಯೆ ಜಿ.ಮೈ:ಆಶಾ:ಇತರೆ: 2008–09 ದಿನಾಂಕ: 16.7.08.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 27.6.2008ರ ಪತ್ರದಲ್ಲಿ ಅಧ್ಯಕ್ಷರು, ಕರ್ನಾಟಕ ಆಡಳಿತ ಸೇವೆ ಅಧಿಕಾರಿಗಳ ಸಂಘ (ರಿ), ಬೆಂಗಳೂರು ಇವರು ಸರ್ಕಾರಕ್ಕೆ ಮನವಿ ಸಲ್ಲಿಸಿ, ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರ ಹುದ್ದೆಯನ್ನು ಕೆಎಎಸ್ ಕಿರಿಯ ಶ್ರೇಣಿಯಿಂದ ಹಿರಿಯ ಶ್ರೇಣಿಗೆ ಉನ್ನತೀಕರಿಸಿರುವ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರ ಹುದ್ದೆಯನ್ನು ಅಪರ ಜಿಲ್ಲಾಧಿಕಾರಿಗಳು ಮತ್ತು ಅಪರ ಜಿಲ್ಲಾ ದಂಡಾಧಿಕಾರಿ ಎಂದು ಪದನಾಮೀಕರಿಸುವಂತೆ ಮನವಿ ಮಾಡಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 16.7.2008ರ ಪತ್ರದಲ್ಲಿ ಜಿಲ್ಲಾಧಿಕಾರಿ, ಮೈಸೂರು ಇವರು, ಶಿಷ್ಠಾಚಾರ, ಕಾನೂನು ಸುವ್ಯವಸ್ಥೆ ಮುಂತಾದ ಕೆಲಸಗಳಿಗೆ ಜಿಲ್ಲಾಧಿಕಾರಿಗಳಿಗೆ ಹೆಚ್ಚಿನ ಸಮಯ ಅಗತ್ಯವಿರುವುದರಿಂದ ಈ ಹಿಂದೆ ಮೈಸೂರು ಜಿಲ್ಲೆಗೆ 'ವಿಶೇಷ ಜಿಲ್ಲಾಧಿಕಾರಿ' ಹುದ್ದೆ ಮಂಜೂರಾಗಿ ತದನಂತರ ರದ್ದುಗೊಳಿಸಲಾಗಿತ್ತೆಂದು ತಿಳಿಸುತ್ತಾ, ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರ ಹುದ್ದೆಯನ್ನು 'ವಿಶೇಷ ಜಿಲ್ಲಾಧಿಕಾರಿ' ಎಂದು ಪದನಾಮೀಕರಿಸುವಂತೆ ಕೋರಿರುತ್ತಾರೆ. ಅಧ್ಯಕ್ಷರು, ಕರ್ನಾಟಕ ಆಡಳಿತ ಸೇವೆ ಅಧಿಕಾರಿಗಳ ಸಂಘ, ಬೆಂಗಳೂರು ಹಾಗೂ ಜಿಲ್ಲಾಧಿಕಾರಿಗಳು, ಮೈಸೂರು ಇವರು ಸಲ್ಲಿಸಿರುವ ಕೋರಿಕೆಯನ್ನು ಚರ್ಚಿಸಲು ದಿನಾಂಕ:5.11.2008 ರಂದು ಪ್ರಾದೇಶಿಕ ಆಯುಕ್ತರು, ಬೆಂಗಳೂರು, ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ / ಗ್ರಾಮಾಂತರ ಹಾಗೂ ಮಾನ್ಯ ಕಂದಾಯ ಸಚಿವರ ಆಪ್ತ ಕಾರ್ಯದರ್ಶಿಯವರನ್ನೊಳಗೊಂಡ ಅಧಿಕಾರಿಗಳ ಸಭೆಯನ್ನು ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಕರೆದು ಈ ವಿಷಯವನ್ನು ಸುಧೀರ್ಘವಾಗಿ ಚರ್ಚಿಸಲಾಗಿದೆ.

ಜಿಲ್ಲಾ ಪಂಚಾಯತ್ ವ್ಯವಸ್ಥೆ ಕಾರ್ಯ ರೂಪಕ್ಕೆ ಬರುವ ಮೊದಲು ಜಿಲ್ಲಾಧಿಕಾರಿಗಳ ಜೊತೆ ವಿಶೇಷ ಜಿಲ್ಲಾಧಿಕಾರಿಗಳ ಹುದ್ದೆ ಇದ್ದು, ಕಂದಾಯ ವ್ಯವಸ್ಥೆಯ ಮೇಲ್ವಿಚಾರಣೆಯನ್ನು ವಿಶೇಷ ಜಿಲ್ಲಾಧಿಕಾರಿಗಳು ಜಿಲ್ಲಾ ಮಟ್ಟದಲ್ಲಿ ನೋಡಿಕೊಳ್ಳುತ್ತಿದ್ದರು. ಜಿಲ್ಲಾ ಪರಿಷತ್ ವ್ಯವಸ್ಥೆ ಅಸ್ಥಿತ್ವಕ್ಕೆ ಬಂದ ಮೇಲೆ ವಿಶೇಷ ಜಿಲ್ಲಾಧಿಕಾರಿಗಳ ಹುದ್ದೆಯನ್ನು ರದ್ದುಪಡಿಸಿ (ಬೆಂಗಳೂರು ನಗರ

ಜಿಲ್ಲೆಯನ್ನು ಹೊರತುಪಡಿಸಿ) ವಿಶೇಷ ಜಿಲ್ಲಾಧಿಕಾರಿಗಳ ಕಾರ್ಯಭಾರವನ್ನು ಜಿಲ್ಲಾಧಿಕಾರಿಗಳಿಗೆ ವಹಿಸಲಾಯಿತು. ಇತ್ತೀಚಿನ ದಿನಗಳಲ್ಲಿ ಜಿಲ್ಲಾಧಿಕಾರಿಗಳ ಕಾರ್ಯ ವ್ಯಾಪ್ತಿಗೆ ಹೆಚ್ಚು ಹೆಚ್ಚು ಜವಾಬ್ದಾರಿಗಳನ್ನು ಸರ್ಕಾರವು ವಹಿಸಿದ ನಂತರ ಜಿಲ್ಲಾಧಿಕಾರಿಗಳ ಹುದ್ದೆಯನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಅನುಕೂಲವಾಗುವಂತೆ ಕೇಂದ್ರ ಸ್ಥಾನಿಕ ಸಹಾಯಕರ ಹುದ್ದೆಯನ್ನು ಕೆಎಎಸ್ ಕಿರಿಯ ಶ್ರೇಣಿ ಹುದ್ದೆಯಿಂದ ಹಿರಿಯ ಶ್ರೇಣಿಗೆ ಉನ್ನತೀಕರಿಸಲಾಗಿದೆ. ಉನ್ನತೀಕರಿಸಿದ ಹುದ್ದೆಯಲ್ಲಿ ವಿಶೇಷ ಜಿಲ್ಲಾಧಿಕಾರಿಗಳ ಹುದ್ದೆಗೆ ಸಮಾನವಾದ ಕೆಎಎಸ್ ಹಿರಿಯ ಶ್ರೇಣಿಯ ಅಧಿಕಾರಿಗಳು ಕಾರ್ಯ ನಿರ್ವಹಿಸುತ್ತಿರುವುದರಿಂದ ಹಾಗೂ ಇವರುಗಳು ಈಗಾಗಲೇ ಅಡಿಶನಲ್ ಮ್ಯಾಜಿಸ್ಟ್ರೇಟ್ ಆಗಿ ಕೂಡ ಕಾರ್ಯ ನಿರ್ವಹಿಸುತ್ತಿರುವ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರ ಹುದ್ದೆಯನ್ನು ಅಪರ ಜಿಲ್ಲಾಧಿಕಾರಿ ಮತ್ತು ಅಡಿಶನಲ್ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟ್ ಎಂದು ಮರು ಪದನಾಮೀಕರಿಸಲು ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಕಂಇ 353 ಬಿಎಂಎಂ 2008, ಬೆಂಗಳೂರು, ದಿನಾಂಕ: 28ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ನಿಯಮ 210 ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ರಾಜ್ಯದ ಎಲ್ಲಾ ಜಿಲ್ಲೆಯ ಜಿಲ್ಲಾಧಿಕಾರಿಗಳ 'ಕೇಂದ್ರ ಸ್ಥಾನಿಕ ಸಹಾಯಕರ' ಹುದ್ದೆಗಳನ್ನು **"ಅಪರ ಜಿಲ್ಲಾಧಿಕಾರಿಗಳು ಮತ್ತು ಅಪರ ಜಿಲ್ಲಾ ದಂಡಾಧಿಕಾರಿ"** ಎಂದು ಮರು ಪದನಾಮೀಕರಿಸಿ ಆದೇಶಿಸಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಸೇವೆಗಳು–2) ಅನಧಿಕೃತ ಟಿಪ್ಪಣಿ ಸಂಖ್ಯೆ:ಸಿಆಸುಇ 55 ಆಸೇಇ 2009, ದಿನಾಂಕ:19.03.2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ದೇಸಾಯಿ**
ಪಿ.ಆರ್. 1038 ವಿಶೇಷಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು ಮತ್ತು ವಿ.ನಿ).

**ವಿಷಯ:** ಶ್ರೀಮತಿ ವೀಣಾ ಬಿ.ಎನ್, ತಹಶೀಲ್ದಾರ್ ಗ್ರೇಡ್–2, ಪ್ರಸ್ತುತ ತಹಶೀಲ್ದಾರ್, ಚಿಕ್ಕಮಗಳೂರು ತಾಲ್ಲೂಕು ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಕಂಇ 110 ಎಎಸ್‌ಡಿ 2006, ದಿನಾಂಕ: 22.06.2006.
2. ಶ್ರೀಮತಿ ವೀಣಾ ಬಿ.ಎನ್, ಇವರ ಮನವಿ ದಿನಾಂಕ: 17.02.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ:(1), ದಿನಾಂಕ: 22.06.2006ರ ಅಧಿಸೂಚನೆಯಲ್ಲಿ, ಶ್ರೀಮತಿ ವೀಣಾ.ಬಿ.ಎನ್ ಇವರು ಕಂದಾಯ ಇಲಾಖೆಯ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿಗೊಂಡಿರುತ್ತಾರೆ. ಸದರಿಯವರು ಈ ಹುದ್ದೆಗೆ, ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ, ಸಹ ಶಿಕ್ಷಕಿ (ಹಿಂದಿ) ಯಾಗಿ ಸರ್ಕಾರಿ ಪ್ರೌಢಶಾಲೆ, ಅಕ್ಕನಹಳ್ಳಿ ಕ್ರಾಸ್, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ ಇಲ್ಲಿ ದಿನಾಂಕ: 14.01.2004 ರಿಂದ 23.06.2006ರವರೆಗೆ ಸಲ್ಲಿಸಿದ ಸೇವೆಯನ್ನು ಪಿಂಚಣಿ ಮಂಜೂರಾತಿಗೆ ಪರಿಗಣಿಸಲು ಕೋರಿರುತ್ತಾರೆ. ಸದರಿಯವರು ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಹಾಸನ ಇವರ ಜ್ಞಾಪನಾ ಸಂ: ಸಿಬ್ಬಂದಿ:2:482 ಕ.ಬಿ.ಬ:42:06–07, ದಿನಾಂಕ: 23.06.2006ರನ್ವಯ ಶಿಕ್ಷಣ ಇಲಾಖೆಯಿಂದ ಬಿಡುಗಡೆ ಹೊಂದಿರುತ್ತಾರೆ. ಆದ್ದರಿಂದ ಸದರಿಯವರು ಶಿಕ್ಷಣ ಇಲಾಖೆಯಲ್ಲಿ ದಿನಾಂಕ: 14.01.2004 ರಿಂದ 23.6.2006ರವರೆಗೆ ಸೇವಾ ಅವಧಿಯನ್ನು ಪೂರೈಸಿದ್ದು, ಇವರ ಹಿಂದಿನ ಸೇವೆಯನ್ನು ಪರಿಗಣಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಶ್ರೀಮತಿ ಬಿ.ಎನ್. ವೀಣಾ ತಹಶೀಲ್ದಾರ್ ಇವರ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಸದರಿಯವರ ಮೂಲ ಸೇವಾ ಪುಸ್ತಕದಲ್ಲಿ ದಾಖಲಿಸಿರುವಂತೆ ಇವರು ಈ ಹಿಂದೆ ಶಿಕ್ಷಣ ಇಲಾಖೆಯಲ್ಲಿ ಸಹಶಿಕ್ಷಕಿಯಾಗಿ ಸಲ್ಲಿಸಿದ್ದ ಸೇವೆ ದಿನಾಂಕ: 14.01.2004 ರಿಂದ 23.06.2006ರವರೆಗೆ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಪ್ರಸ್ತುತ ಹುದ್ದೆಯ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 71 ಎಎಸ್‌ಡಿ 2007, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀಮತಿ ಬಿ.ಎನ್. ವೀಣಾ ತಹಶೀಲ್ದಾರ್, ಚಿಕ್ಕಮಗಳೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕರಾಗಿ ದಿನಾಂಕ: 14.01.2004 ರಿಂದ 23.06.2006ರವರೆಗೆ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಅವರ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ–7) ರವರ ಟಿಪ್ಪಣಿ ಸಂ: ಆಇ 110 ವೆಚ್ಚ–7/2009, ದಿನಾಂಕ: 03.03.2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1039 **ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಬಿ.ಶಿವಸ್ವಾಮಿ, ತಹಶೀಲ್ದಾರ್ ಗ್ರೇಡ್–2, ಪ್ರಸ್ತುತ ತಹಶೀಲ್ದಾರ್, ಕುಣಿಗಲ್ ತಾಲ್ಲೂಕು ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ: ಕಂಇ 241 ಎಎಸ್‌ಡಿ 2005 (1), ದಿನಾಂಕ: 25.01.2006.

2. ಶ್ರೀ ಬಿ.ಶಿವಸ್ವಾಮಿ, ಇವರ ಮನವಿ ದಿನಾಂಕ: 10.10.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ:(1), ದಿನಾಂಕ: 25.01.2006ರ ಅಧಿಸೂಚನೆಯಲ್ಲಿ, ಶ್ರೀ ಬಿ.ಶಿವಸ್ವಾಮಿ ಇವರು ಕಂದಾಯ ಇಲಾಖೆಯ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿಗೊಂಡಿರುತ್ತಾರೆ. ಸದರಿಯವರು ಈ ಹುದ್ದೆಗೆ, ಸೇರುವ ಪೂರ್ವದಲ್ಲಿ ಅಬಕಾರಿ ಇಲಾಖೆಯಲ್ಲಿ, ಅಬಕಾರಿ ಉಪ ನಿರೀಕ್ಷಕರು (ಜಾರಿ ಮತ್ತು ತನಿಖೆ), ಕೆ.ಆರ್.ನಗರ ತಾಲ್ಲೂಕು, ಮೈಸೂರು ಜಿಲ್ಲೆ ಇಲ್ಲಿ ದಿನಾಂಕ: 28.05.2004 ರಿಂದ 31.01.2006ರವರೆಗೆ ಸಲ್ಲಿಸಿದ ಸೇವೆಯನ್ನು ಪಿಂಚಣಿ ಮಂಜೂರಾತಿಗೆ ಪರಿಗಣಿಸಲು ಕೋರಿರುತ್ತಾರೆ. ಸದರಿಯವರು ಅಬಕಾರಿ ಅಧೀಕ್ಷಕರು, ಇ.ಐ.ಬಿ. ಮೈಸೂರು–ಚಾಮರಾಜನಗರ ಜಿಲ್ಲೆ, ಮೈಸೂರು ಇವರ ಅಧಿಕತ ಜ್ಞಾಪನ ಸಂ: ಇಐಬಿ/ಇಎಸ್‌ಟಿ/38/05–06, ದಿನಾಂಕ: 31.01.2006ರನ್ವಯ ಅಬಕಾರಿ ಉಪ ನಿರೀಕ್ಷಕರು (ಜಾರಿ ಮತ್ತು ತನಿಖೆ) ಹುದ್ದೆಯಿಂದ ಬಿಡುಗಡೆ ಹೊಂದಿರುತ್ತಾರೆ. ಆದ್ದರಿಂದ ಶ್ರೀಯುತರು ಅಬಕಾರಿ ಇಲಾಖೆಯಲ್ಲಿ ದಿನಾಂಕ: 28.05.2004 ರಿಂದ 31.01.2006ರವರೆಗೆ ಸೇವಾ ಅವಧಿಯನ್ನು ಪೂರೈಸಿದ್ದು, ಇವರ ಹಿಂದಿನ ಸೇವೆಯನ್ನು ಪರಿಗಣಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಶ್ರೀ ಬಿ.ಶಿವಸ್ವಾಮಿ, ತಹಶೀಲ್ದಾರ್ ಇವರ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಶ್ರೀಯುತರ ಮೂಲ ಸೇವಾ ಪುಸ್ತಕದಲ್ಲಿ ದಾಖಲಿಸಿರುವಂತೆ ಇವರು ಈ ಹಿಂದೆ ಅಬಕಾರಿ ಇಲಾಖೆಯಲ್ಲಿ, ಅಬಕಾರಿ ಉಪ ನಿರೀಕ್ಷಕರಾಗಿ (ಜಾರಿ ಮತ್ತು ತನಿಖೆ) ಸಲ್ಲಿಸಿದ್ದ ಸೇವೆ ದಿನಾಂಕ: 28.05.2004 ರಿಂದ 31.01.2006ರವರೆಗೆ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಪ್ರಸ್ತುತ ಹುದ್ದೆಯ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 06 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಬಿ. ಶಿವಸ್ವಾಮಿ ತಹಶೀಲ್ದಾರ್, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ಅಬಕಾರಿ ಇಲಾಖೆಯಲ್ಲಿ ಅಬಕಾರಿ ಉಪ ನಿರೀಕ್ಷಕರಾಗಿ (ಜಾರಿ ಮತ್ತು ತನಿಖೆ) ದಿನಾಂಕ: 28.05.2004 ರಿಂದ 31.01.2006ರವರೆಗೆ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಅವರ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ–7) ರವರ ಟಿಪ್ಪಣಿ ಸಂ: ಆಇ 18 ವೆಚ್ಚ–7/2009, ದಿನಾಂಕ: 05.03.2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1040 **ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಸಹದೇವ ಪರಶುರಾಮ ಬೊಬಾಟಿ, ಜಂಟಿ ನಿರ್ದೇಶಕರು, ನಗರಮಾಪನ, ಉತ್ತರವಲಯ, ಬೆಳಗಾವಿ ರವರು ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಉಪನಿರ್ದೇಶಕರು ಹಾಲಿ ನಿವೃತ್ತಿ ರವರ ವಿರುದ್ಧ 1944ರ ಕ್ರಿಮಿನಲ್ ಲಾ(ಅಮೆಂಡ್‌ಮೆಂಟ್) ಆರ್ಡಿನೆನ್ಸ್ ಕಲಂ 3ರಡಿಯಲ್ಲಿ ಆರೋಪಿತರ ಸ್ಥಿರ ಮತ್ತು ಚರಾಸ್ಥಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಸಂಬಂಧ ಅನುಜ್ಞಾ ಪತ್ರವನ್ನು ನೀಡುವ ಬಗ್ಗೆ.

**ಓದಲಾಗಿದೆ:** ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಲ್–3 ಸಿಆರ್ 3/2008 ದಿನಾಂಕ: 6.12.2008.

**ಪ್ರಸ್ತಾವನೆ:**

ಶ್ರೀ ಸಹದೇವ ಪರಶುರಾಮ ಬೊಬಾಟಿ, ಜಂಟಿ ನಿರ್ದೇಶಕರು, ನಗರಮಾಪನ, ಉತ್ತರವಲಯ, ಬೆಳಗಾವಿ ರವರು ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಉಪನಿರ್ದೇಶಕರು ಹಾಲಿ ನಿವೃತ್ತಿ ಇವರು ಗೊತ್ತಾದ ಆದಾಯಕ್ಕಿಂತ ಹೆಚ್ಚಿನ ಚರ ಮತ್ತು ಸ್ಥಿರಾಸ್ತಿಗಳನ್ನು ಅಕ್ರಮವಾಗಿ ಗಳಿಸಿರುತ್ತಾರೆಂಬ ಖಚಿತ ಮಾಹಿತಿಯ ಮೇರೆಗೆ ಸದರಿಯವರ ವಿರುದ್ಧ ಬೆಳಗಾವಿ ಲೋಕಾಯುಕ್ತ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 3/2008ನ್ನು ದಿನಾಂಕ: 8.1.2008ರಂದು ಪ್ರಕರಣವನ್ನು ದಾಖಲಿಸಿ ದಿನಾಂಕ: 10.1.2008ರಂದು ಪಂಚರುಗಳ ಸಮಕ್ಷಮ ಆರೋಪಿತರಿಗೆ ಸಂಬಂಧಿಸಿದ ಮನೆ/ಕಟ್ಟಡಗಳು/ಕಛೇರಿ ಇತ್ಯಾದಿ ಸ್ಥಳಗಳ ಪರಿಶೋಧನೆಯನ್ನು ಲೋಕಾಯುಕ್ತ ಪೊಲೀಸರು ಮಾಡಿದ್ದು ಪ್ರಕರಣದ ಮುಂದಿನ ತನಿಖೆ ಕೈಗೊಂಡಿರುತ್ತಾರೆ. ಪ್ರಕರಣದ ಈವರೆಗಿನ ತನಿಖೆಯಿಂದ ಆರೋಪಿತ ಅಧಿಕಾರಿ ಶ್ರೀ ಸಹದೇವ ಪರಶುರಾಮ ಬೊಬಾಟಿ, ಜಂಟಿ ನಿರ್ದೇಶಕರು, ನಗರಮಾಪನ, ಉತ್ತರವಲಯ, ಬೆಳಗಾವಿ ರವರು ತಮ್ಮ ಗೊತ್ತಾದ ಆದಾಯಕ್ಕಿಂತ ಹೆಚ್ಚಿನ ಚರ ಮತ್ತು ಸ್ಥಿರ ಆಸ್ತಿಗಳನ್ನು ಹೊಂದಿರುವುದು ದೃಢಪಟ್ಟಿದ್ದು ಇದರ ವಿವರಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನೀಡಲಾಗಿದೆ. ಸದರಿ ಚರ ಮತ್ತು ಸ್ಥಿರ ಆಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಅವಶ್ಯಕತೆ ಇರುತ್ತದೆ ಎಂದು, ಈ ಬಗ್ಗೆ ತನಿಖಾಧಿಕಾರಿಯು ಸಕ್ಷಮ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬೇಕಾಗಿದ್ದು ಈ ಸಂಬಂಧವಾಗಿ ದಿ ಕ್ರಿಮಿನಲ್ ಲಾ ಅಮೆಂಡ್‌ಮೆಂಟ್ ಆರ್ಡಿನೆನ್ಸ್ 1944ರ ಕಲಂ–3ರಡಿ ಅನುಜ್ಞಾ ಪತ್ರವನ್ನು ತನಿಖಾಧಿಕಾರಿಗೆ ನೀಡುವಂತೆ ಮೇಲೆ ಓದಲಾದ ದಿನಾಂಕ: 25.08.2008ರ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಕೋರಿರುವರು.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಗೊತ್ತಾದ ಆದಾಯಕ್ಕಿಂತ ಹೆಚ್ಚಾಗಿ ಹೊಂದಿರುವ ಚರ ಮತ್ತು ಸ್ಥಿರ ಆಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಸರ್ಕಾರವು ತೀರ್ಮಾನಿಸಿರುತ್ತದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 88 ಭೂದಾಸೇ(1) 2008, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಸಹದೇವ ಪರಶುರಾಮ ಬೊಬಾಟಿ, ಜಂಟಿ ನಿರ್ದೇಶಕರು, ನಗರಮಾಪನ, ಉತ್ತರವಲಯ, ಬೆಳಗಾವಿ ಹಾಲಿ ನಿವೃತ್ತಿ ಇವರು ಗೊತ್ತಾದ ಆದಾಯ ಮುಲಕ್ಕಿಂತ ಹೆಚ್ಚು ಚರ ಮತ್ತು ಸ್ಥಿರ ಆಸ್ತಿಗಳನ್ನು ಅಕ್ರಮವಾಗಿ ಗಳಿಸಿರುವ ಮಾಹಿತಿಯನ್ನಾಧರಿಸಿ ಕರ್ನಾಟಕ ಲೋಕಾಯುಕ್ತ ಪೊಲೀಸರು ಸದರಿಯವರ ವಿರುದ್ಧ ಬೆಳಗಾವಿ ಲೋಕಾಯುಕ್ತ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 3/2008ನ್ನು ದಿನಾಂಕ: 8.1.2008 ರಂದು ದಾಖಲಿಸಿ ದಿನಾಂಕ: 10.1.2008 ರಂದು ಪಂಚರ ಸಮಕ್ಷಮ ಆರೋಪಿತರಿಗೆ ಸಂಬಂಧಿಸಿದ ಮನೆ/ಕಟ್ಟಡಗಳು/ಕಛೇರಿ ಇತ್ಯಾದಿ ಸ್ಥಳಗಳ ಪರಿಶೋಧನೆ ಮಾಡಿದಾಗ ಗೊತ್ತಾದ ಆದಾಯಕ್ಕಿಂತ ಹೆಚ್ಚಿನ ಸಂಪತ್ತು ಹೊಂದಿರುವುದು ಕಂಡುಬಂದಿದ್ದು, ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನೀಡಲಾಗಿರುವ ವಿವರಗಳುಳ್ಳ ಆಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಸಂಬಂಧ, ಸಂಬಂಧಪಟ್ಟ ತನಿಖಾಧಿಕಾರಿಯು ಘನ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬೇಕಾಗಿದ್ದು ಈ ಸಂಬಂಧ ದಿ ಕ್ರಿಮಿನಲ್ ಲಾ ಅಮೆಂಡ್‌ಮೆಂಟ್ ಆರ್ಡಿನೆನ್ಸ್ 1944ರ ಕಲಂ–3ರಡಿ ಇವುಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಸಲುವಾಗಿ, ಸಕ್ಷಮ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಲು ಈ ಮೂಲಕ ಸರ್ಕಾರದ ಅನುಮೋದನೆಯನ್ನು ಕರ್ನಾಟಕ ಲೋಕಾಯುಕ್ತ ಕಛೇರಿಯ ಪರ ಪೊಲೀಸ್ ಮಹಾ ನಿರ್ದೇಶಕರವರಿಗೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಾಪನ).

**ಸರ್ಕಾರದ ಆದೇಶ ಸಂ.ಕಂಇ 88 ಭೂದಾಸೇ(1) 2008, ಬೆಂಗಳೂರು, ದಿನಾಂಕ: 23.3.2009ಕ್ಕೆ**

**(ಅನುಬಂಧ)**

**(ಶ್ರೀ ಎಸ್.ಬಿ.ಬೊಬಾಟಿ, ನಿವೃತ್ತ ಭೂದಾಖಲೆಗಳ ಜಂಟಿ ನಿರ್ದೇಶಕರ ಆಸ್ತಿ ವಿವರ)**

| ಕ್ರ. ಸಂ. | ಆಸ್ತಿಯ ವಿವರಗಳು | ಮೌಲ್ಯ ರೂಪಾಯಿಗಳಲ್ಲಿ |
|---|---|---|
| 1 | ಟಾಟ ಇಂಡಿಕಾ ಕಾರು ನಂ. ಕೆ 22 ಎಂಸಿ 1020 ಎ.ಸಿ. ಮತ್ತು ಟೇಪ್ ರೆಕಾರ್ಡರ್ ಸಮೇತ ಆರೋಪಿತರಾದ ಶ್ರೀ ಎಸ್.ಪಿ.ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 3,42,521–00 |
| 2 | ಹೊಂಡಾ ಆಕ್ವಿವಾ ಕೆಎ 22 ಯು 1020 ಆರೋಪಿತರ ಮಗ ಶ್ರೀ ಸಂತೋಷ ಸಹದೇವ ಬೋಬಾಟಿರವರ ಹೆಸರಿನಲ್ಲಿರುತ್ತದೆ. | 38,000–00 |
| 3 | ಯಮಹಾ ಮೋಟಾರ್ ಸೈಕಲ್ ಕೆಎ 22 ಆರ್ 6970 ಆರೋಪಿತರ ಮಗ ಶ್ರೀ ವಿನಾಯಕ ಸಹದೇವ ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 30,000–00 |

| ಕ್ರ. ಸಂ. | ಆಸ್ತಿಯ ವಿವರಗಳು | ಮೌಲ್ಯ ರೂಪಾಯಿಗಳಲ್ಲಿ |
|---|---|---|
| 4 | ಬೋರವಲ್ ಮೋಟಾರ್ 2 ಎಚ್.ಪಿ. ಆರೋಪಿತರಾದ ಶ್ರೀ ಎಸ್.ಪಿ. ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 20,000–00 |
| 5 | ಹಳಿಯಾಳ ಸರ್ವೆ ನಂ.453/1/0/1 ಫ್ಲಾಟ್ ಆರೋಪಿತರಾದ ಶ್ರೀ ಎಸ್.ಪಿ. ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 90,000–00 |
| 6 | ಮನೆ ಶೋಧನಾ ಕಾಲಕ್ಕೆ ದೊರೆತ ಬಂಗಾರದ ಆಭರಣಗಳು 706.800 ಗ್ರಾಂ | 6,77,000–00 |
| 7 | ಮನೆ ಶೋಧನಾ ಕಾಲಕ್ಕೆ ದೊರೆತ ಬೆಳ್ಳಿಯ ಆಭರಣಗಳು 2421 ಗ್ರಾಂ | 40,662–00 |
| 8 | ನಗದು ಹಣ | 1,71,845–00 |
| 9 | 1/2 ಎಚ್.ಪಿ. ನೀರಿನ ಮೋಟಾರ್ ಆರೋಪಿತರಾದ ಶ್ರೀ ಎಸ್.ಪಿ. ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 2,000–00 |
| 10 | ಹಳಿಯಾಳ ಗ್ರಾಮದಲ್ಲಿ ಸರ್ವೆ ನಂ. 453/1/ಎ/1 ರಲ್ಲಿ ಎಸ್.ಬಿ.ಐ ಹಾಗೂ ಎ.ಟಿ.ಎಂ ಕಟ್ಟಡ ಕಟ್ಟಿದ್ದು ಇರುತ್ತದೆ. ಆರೋಪಿತರಾದ ಶ್ರೀ ಎಸ್.ಪಿ. ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 11,10,000–00 |
| 11 | ಹಳಿಯಾಳ ಗ್ರಾಮದಲ್ಲಿ ಸರ್ವೆ ನಂ. 59/1 ರಲ್ಲಿ ಕೃಷಿ ಭೂಮಿ 2 ಎಕರೆ 2 ಗುಂಟೆಗಳು ಇರುತ್ತದೆ. ಆರೋಪಿತರಾದ ಮಕ್ಕಳಾ ಶ್ರೀ ಸಂತೋಷ ಹಾಗೂ ವಿನಾಯಕ ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 60,000–00 |
| 12 | ಸದಾಶಿವ ನಗರ ಸಿ.ಟಿ.ಎಸ್. ನಂ.4858/76 ನೇದ್ದರಲ್ಲಿ ಮನೆ ಹಾಗೂ ಸೈಟ್, 258 ಸ್ಕೇರ್ ಮೀ. ಆರೋಪಿತರಾದ ಶ್ರೀ ಎಸ್.ಪಿ.ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | – |
| 13 | ರವಿವಾರ ಪೇಟೆ ಸಿಟಿಎಸ್ ನಂ. 837 ನೇದ್ದರಲ್ಲಿ ಕಟ್ಟಿದ ಅಪಾರ್ಟ್‌ಮೆಂಟ್ ಹಾಗೂ ಅಂಗಡಿಗಳು ಇವುಗಳ ಆರೋಪಿತರ ಮಕ್ಕಳು ಹಾಗೂ ಶ್ರೀ ಬಾಬಶೇಠ ಎಂಬುವರಿಗೆ 50:50ರಂತೆ ಸೇರಿರುತ್ತದೆ. | – |
| 14 | ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ಎಮ್.ಕೆ. ಹುಬ್ಬಳ್ಳಿ 08/11-01/99 ಸರ್ಟಿಫಿಕೇಟ್ ನಂ.9912 ಆರೋಪಿತರಾದ ಶ್ರೀ ಎಸ್.ಪಿ. ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 5,000–00<br>2,326–14 |
| 15 | ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ಎಮ್.ಕೆ. ಹುಬ್ಬಳ್ಳಿ 08/11-01/99 ಸರ್ಟಿಫಿಕೇಟ್ ನಂ.9916 ಆರೋಪಿತರ ಮಗ ಶ್ರೀ ಸಂತೋಷ ಎಸ್.ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 5,000–00<br>634–08 |
| 16 | ರೇಣುಕಾ ಶುಗರ್ಸ್ ಲಿಮಿಟೆಡ್ 500 ಶೇರ್‌ಗಳು ಸಂಖ್ಯೆ: 2130501 ರಿಂದ 2131000 ರವರೆಗಿರುತ್ತದೆ. ಆರೋಪಿತರಾದ ಶ್ರೀ ಎಸ್.ಪಿ. ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | – |
| 17 | ಐ.ಪಿ.ಓ.ದಿಂದ ದಿನಾಂಕ: 17/9/2002ರಂದು ಹಂಚಿಕೆ ಮಾಡಿರುವ ಯುಬಿಐ ಕಂಪನಿಯ\ 300 ಶೇರ್ಸ್‌ಗಳು ನಂ.00053116 ಆರೋಪಿತರ ಮತ್ತು ಅವರ ಕುಟುಂಬ ಸದಸ್ಯರ ಹೆಸರಿನಲ್ಲಿರುತ್ತದೆ. | 46,755–00 |
| 18 | ಮಾರ್ಕಂಡೇಯ ಕೋ-ಆಪರೇಟಿವ್ ಶುಗರ್ಸ್ ಲಿಮಿಟೆಡ್ ಬೆಳಗಾವಿ, ಆರ್. ನಂ. ಬಿ 10970 ದಿನಾಂಕ: 1/2/1999 ಆರೋಪಿತರ ಪತ್ನಿ ಶ್ರೀಮತಿ ಶಾರದಾ ಎಸ್. ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 2,000–00 |
| 19 | ಮಾರ್ಕಂಡೇಯ ಕೋ-ಅಪರೇಟಿವ್ ಶುಗರ್ಸ್ ಲಿಮಿಟೆಡ್ ಬೆಳಗಾವಿ, ಆರ್. ನಂ. ಬಿ 10971 ದಿನಾಂಕ: 1/2/1999 ಆರೋಪಿತರಾದ ಶ್ರೀ ಎಸ್.ಪಿ. ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 2,000–00 |
| 20 | ಮಾರ್ಕಂಡೇಯ ಕೋ-ಅಪರೇಟಿವ್ ಶುಗರ್ಸ್ ಲಿಮಿಟೆಡ್ ಬೆಳಗಾವಿ, ಆರ್. ನಂ. ಬಿ 10978 ದಿನಾಂಕ: 17/2/1999 ಆರೋಪಿತರಾದ ಮಗ ಶ್ರೀ ಸಂತೋಶ ಎಸ್. ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 2,000–00 |
| 21 | ಮಾರ್ಕಂಡೇಯ ಕೋ-ಅಪರೇಟಿವ್ ಶುಗರ್ಸ್ ಲಿಮಿಟೆಡ್ ಬೆಳಗಾವಿ, ಆರ್. ನಂ. ಬಿ 10977 ದಿನಾಂಕ: 17/2/1999 ಆರೋಪಿತರ ಮಗ ಶ್ರೀ ವಿನಾಯಕ ಸಹದೇವ ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 2,000–00 |

| ಕ್ರ. ಸಂ. | ಆಸ್ತಿಯ ವಿವರಗಳು | ಮೌಲ್ಯ ರೂಪಾಯಿಗಳಲ್ಲಿ |
|---|---|---|
| 22 | ಯುಟಿಐ ಟ್ಯಾಕ್ಸ್ ಫ್ರೀ ಬಾಂಡ್ ಪ್ರಮಾಣ ಪತ್ರ ಸಂಖ್ಯೆ: 44443708 ಒಟ್ಟು 34 ಶೇರ್ಸ್‌ಗಳು ದಿನಾಂಕ:1/4/2004 ಆರೋಪಿತರ ಮಗಳು ಶ್ರೀದೇವಿ ಎಸ್.ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 3,400–00 |
| 23 | ಎಸ್.ಬಿ.ಐ. ಹಳಿಯಾಳ ಬ್ರಾಂಡ್ ಖಾತೆ ನಂ.11131762425 ಆರೋಪಿತರ ಹೆಸರಿನಲ್ಲಿತ್ತದೆ. | 6,46,703–27 |
| 24 | ಎಸ್.ಬಿ.ಐ. ಹಳಿಯಾಳ ಬ್ರಾಂಡ್ ಎಫ್.ಡಿ.ಆರ್. 11131817783 ಆರೋಪಿತರ ಹೆಸರಿನಲ್ಲಿರುತ್ತದೆ. | 50,000–00 |
| 25 | ಎಸ್.ಬಿ.ಐ. ಹಳಿಯಾಳ ಬ್ರಾಂಡ್ ಎಫ್.ಡಿ.ಆರ್. 11131817794 ಆರೋಪಿತರ ಹೆಸರಿನಲ್ಲಿರುತ್ತದೆ. | 50,000–00 |
| 26 | ಎಸ್.ಬಿ.ಐ. ಹಳಿಯಾಳ ಬ್ರಾಂಡ್ ಎಫ್.ಡಿ.ಆರ್.30159479259 ಆರೋಪಿತರ ಹೆಸರಿನಲ್ಲಿರುತ್ತದೆ. | 50,000–00 |
| 27 | ಎಸ್.ಬಿ.ಐ. ಹಳಿಯಾಳ ಬ್ರಾಂಡ್ ಎಫ್.ಡಿ.ಆರ್.30174296799 ಆರೋಪಿತರ ಹೆಸರಿನಲ್ಲಿರುತ್ತದೆ. | 50,000–00 |
| 28 | ಎಸ್.ಬಿ.ಐ. ಹಳಿಯಾಳ ಬ್ರಾಂಡ್ ಎಫ್.ಡಿ.ಆರ್.30267001847 ಆರೋಪಿತರ ಹೆಸರಿನಲ್ಲಿರುತ್ತದೆ. | 2,00,000–00 |
| 29 | ಎಸ್.ಬಿ.ಐ. ಹಳಿಯಾಳ ಬ್ರಾಂಡ್ ಎಫ್.ಡಿ.ಆರ್.30267001916 ಆರೋಪಿತರ ಹೆಸರಿನಲ್ಲಿರುತ್ತದೆ. | 1,00,000–00 |
| 30 | ಎಸ್.ಬಿ.ಐ ಹಳಿಯಾಳದಲ್ಲಿ ಜಂಟಿ ಖಾತೆ ಆರೋಪಿತರ ಮಗ ಶ್ರೀ ವಿನಾಯಕ ಮತ್ತು ಪತ್ನಿ ಶ್ರೀಮತಿ ಶಾರದಾ ರವರ ಹೆಸರಿನಲ್ಲಿರುತ್ತದೆ. | 2,383–40 |
| 31 | ಎಸ್.ಬಿ.ಐ. ಹಳಿಯಾಳದಲ್ಲಿ FDR. NO. 30159479259 ಆರೋಪಿತರ ಮಗ ಶ್ರೀ ವಿನಾಯಕ ಪರಶುರಾಮ ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 50,000–00 |
| 32 | ಎಸ್.ಬಿ.ಐ. ಹಳಿಯಾಳದಲ್ಲಿ FDR. NO. 30156538141 ಆರೋಪಿತರ ಮಗ ಶ್ರೀ ವಿನಾಯಕ ಪರಶುರಾಮ ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 1,00,000–00 |
| 33 | ಎಸ್.ಬಿ.ಐ. ಸರಕಾರಿ ಇಸ್ಟೇಟ BR. BGM. SB A/C NO. 10988614796 ಆರೋಪಿತರ ಪತ್ನಿ ಶ್ರೀಮತಿ ಶಾರದಾ ಪರಶುರಾಮ ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 1,05,216–00 |
| 34 | ಎಸ್.ಬಿ.ಐ. ಸರಕಾರಿ ಇಸ್ಟೇಟ BR. BGM. SB A/C NO. 10988614785 ಆರೋಪಿತರ ಹೆಸರಿನಲ್ಲಿರುತ್ತದೆ. | 1,88,394–00 |
| 35 | ದಿ ಬೆಳಗಾವಿ ಪಾಯಿನರ್ ಅರ್ಬನ ಕೋ.ಆಫ್ ಬ್ಯಾಂಕ್ ಬೆಳಗಾವಿ SB A/C NO. 262 ಆರೋಪಿತರ ಹೆಸರಿನಲ್ಲಿರುತ್ತದೆ. | 8,343–00 |
| 36 | ದಿ ಬೆಳಗಾವಿ ಪಾಯಿನರ್ ಅರ್ಬನ ಕೋ.ಆಫ್ ಬ್ಯಾಂಕ್ ಬೆಳಗಾವಿ SB A/C FDR NO.2691 ಆರೋಪಿತರ ಪತ್ನಿ ಶ್ರೀಮತಿ ಶಾರದಾ ಎಸ್.ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 45,000–00 |
| 37 | ದಿ ಬೆಳಗಾವಿ ಪಾಯಿನರ್ ಅರ್ಬನ ಕೋ.ಆಫ್ ಬ್ಯಾಂಕ್ ಬೆಳಗಾವಿ SB A/C FDR NO.2692 ಆರೋಪಿತರ ಪತ್ನಿ ಶ್ರೀಮತಿ ಶಾರದಾ ಎಸ್.ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 45,000–00 |
| 38 | ದಿ ಬೆಳಗಾವಿ ಪಾಯಿನರ್ ಅರ್ಬನ ಕೋ.ಆಫ್ ಬ್ಯಾಂಕ್ ಬೆಳಗಾವಿ SB A/C FDR NO.2689 ಆರೋಪಿತರ ಮಗ ಶ್ರೀ ವಿನಾಯಕ ಎಸ್.ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 45,000–00 |
| 39 | ದಿ ಬೆಳಗಾವಿ ಪಾಯಿನರ್ ಅರ್ಬನ ಕೋ.ಆಫ್ ಬ್ಯಾಂಕ್ ಬೆಳಗಾವಿ SB A/C FDR NO.2690 ಆರೋಪಿತರ ಮಗ ಶ್ರೀ ವಿನಾಯಕ ಎಸ್.ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 45,000–00 |
| 40 | ದಿ ಬೆಳಗಾವಿ ಪಾಯಿನರ್ ಅರ್ಬನ ಕೋ.ಆಫ್ ಬ್ಯಾಂಕ್ ಬೆಳಗಾವಿ SB A/C FDR NO.2693 ಆರೋಪಿತರ ಮಗ ಶ್ರೀ ಸಂತೋಷ ಎಸ್.ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 20,000–00 |
| 41 | ದಿ ಬೆಳಗಾವಿ ಪಾಯಿನರ್ ಅರ್ಬನ ಕೋ.ಆಫ್ ಬ್ಯಾಂಕ್ ಬೆಳಗಾವಿ CURRANT A/C No. 203 ಆರೋಪಿತರ ಮಗ ಶ್ರೀ ಸಂತೋಷ ಎಸ್.ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 1,888–00 |
| 42 | ದಿ ಬೆಳಗಾವಿ ಪಾಯಿನರ್ ಅರ್ಬನ ಕೋ.ಆಫ್ ಬ್ಯಾಂಕ್ ಬೆಳಗಾವಿ CURRANT A/C No. 172 ಆರೋಪಿತರ ಮಗ ಶ್ರೀ ವಿನಾಯಕ ಎಸ್.ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 61,674–00 |
| 43 | ಐ.ಎನ್.ಜಿ. ವೈಶ್ಯಾ ಬ್ಯಾಂಕ್ ಕಾಲೇಜ ರೋಡ್ ಬೆಳಗಾವಿ JOINT SB A/C NO. 150010026195 ಆರೋಪಿತರ ಪತ್ನಿ ಶ್ರೀಮತಿ ಶಾರದಾ ಎಸ್.ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 10,124–58 |

| ಕ್ರ. ಸಂ. | ಆಸ್ತಿಯ ವಿವರಗಳು | ಮೌಲ್ಯ ರೂಪಾಯಿಗಳಲ್ಲಿ |
|---|---|---|
| 44 | ಐ.ಎನ್.ಜಿ. ವೈಶ್ಯಾ ಬ್ಯಾಂಕ್ ಕಾಲೇಜ ರೋಡ್ ಬೆಳಗಾವಿ SB A/C NO. 150010016929 ಆರೋಪಿತರ ಮಗಳು ಶ್ರೀದೇವಿ ಎಸ್.ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 2,412–21 |
| 45 | ಐ.ಎನ್.ಜಿ. ವೈಶ್ಯಾ ಬ್ಯಾಂಕ್ ಕಾಲೇಜ ರೋಡ್ ಬೆಳಗಾವಿ SB A/C NO. 170110026133 ಆರೋಪಿತರ ಮಗಳು ಶ್ರೀದೇವಿ ಎಸ್.ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 2,535–02 |
| 46 | ಹೆಚ್.ಸಿ.ಎಫ್ ಸಿ ಬ್ಯಾಂಕ್ ಬೆಳಗಾವಿ A/C NO. 02531000031818 ಆರೋಪಿತರ ಮಗ ಶ್ರೀ ವಿನಾಯಕ ಎಸ್.ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 11,294–00 |
| 47 | ಹೆಚ್.ಸಿ.ಎಫ್ ಸಿ ಬ್ಯಾಂಕ್ ಬೆಳಗಾವಿ A/C NO. 20253100002710 ಆರೋಪಿತರ ಮಗ ಶ್ರೀ ಸಂತೋಷ ಎಸ್.ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 24,205–84 |
| 48 | ಕೆನರಾ ಬ್ಯಾಂಕ್ ಮೃತ್ಯುಂಜಯ ನಗರ ಧಾರವಾಡ A/C NO. 14658 ಆರೋಪಿತರ ಹೆಸರಿನಲ್ಲಿರುತ್ತದೆ. | 36,521–00 |
| 49 | ಕೆನರಾ ಬ್ಯಾಂಕ್ ಖಡೇ ಬಜಾರ ಬೆಳಗಾವಿ A/C NO. 19818 ಆರೋಪಿತರ ಹೆಸರಿನಲ್ಲಿರುತ್ತದೆ. | 20,332–26 |
| 50 | ದಿ ಮರಾಠಾ ಕೋ–ಆಫ್ ಬ್ಯಾಂಕ್ ಲಿ. ಧಾರವಾಡ A/C NO. 1879 ಆರೋಪಿತರ ಮಗ ಶ್ರೀ ವಿನಾಯಕ ಮತ್ತು ಪತ್ನಿ ಶ್ರೀಮತಿ ಶಾರದಾ ಎಸ್.ಬೋಬಾಟಿ ರವರ ಹೆಸರಿನಲ್ಲಿರುತ್ತದೆ. | 1,30,894–00 |
| 51 | ಸಿಂಡಿಕೇಟ್ ಬ್ಯಾಂಕ್ ಕೆ.ಆರ್.ಸಿ.ಸಿ ಬ್ರಾಂಚ್ ಬೆಳಗಾವಿ A/C NO. 05342200023875 ಆರೋಪಿತರ ಮಕ್ಕಳಾದ ಶ್ರೀ ವಿನಾಯಕ ಮತ್ತು ಸಂತೋಷ ರವರ ಹೆಸರಿನಲ್ಲಿರುತ್ತದೆ. | 23,632–07 |
| 52 | ಸಿಂಡಿಕೇಟ್ ಬ್ಯಾಂಕ್ ಕೆ.ಆರ್.ಸಿ.ಸಿ ಬ್ರಾಂಚ್ ಬೆಳಗಾವಿ A/C NO. 05342200023880 ಆರೋಪಿತರ ಹೆಸರಿನಲ್ಲಿರುತ್ತದೆ. | 1,343–26 |

**ಎಸ್.ಬಿ. ಸಸಾಲಟ್ಟಿ**

ಪಿ.ಆರ್. 1041 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಾಪನ).

**ವಿಷಯ:** ಶ್ರೀ ಆರ್.ನಾಗರಾಜಶೆಟ್ಟಿ, ತಹಶೀಲ್ದಾರ್ ಗ್ರೇಡ್–2, ಪ್ರಸ್ತುತ ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ: ಕಂಇ 241 ಎಎಸ್‌ಡಿ 2005 (1), ದಿನಾಂಕ: 25.01.2006.
2. ಶ್ರೀ ಆರ್. ನಾಗರಾಜಶೆಟ್ಟಿ, ಇವರ ಮನವಿ ದಿನಾಂಕ: 23.10.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ:(1), ದಿನಾಂಕ: 25.01.2006ರ ಅಧಿಸೂಚನೆಯಲ್ಲಿ, ಶ್ರೀ ಆರ್. ನಾಗರಾಜಶೆಟ್ಟಿ ಇವರು ಕಂದಾಯ ಇಲಾಖೆಯ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿಗೊಂಡಿರುತ್ತಾರೆ. ಸದರಿಯವರು ಈ ಹುದ್ದೆಗೆ, ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ, ಸಮಾಜಶಾಸ್ತ್ರ ಉಪನ್ಯಾಸಕರಾಗಿ ದಿನಾಂಕ: 14.08.1993 ರಿಂದ 31.01.2006ರವರೆಗೆ ಸಲ್ಲಿಸಿದ ಸೇವೆಯನ್ನು ಪಿಂಚಣಿ ಮಂಜೂರಾತಿಗೆ ಪರಿಗಣಿಸಲು ಕೋರಿರುತ್ತಾರೆ. ಸದರಿಯವರು ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಬಾಲಕಿಯರ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು ಇವರ ಜ್ಞಾಪನಾ ಸಂ: ಎ:ಸಾ.ಬಾ.ಪ.ಪೂ.ಕಾ/ಉ.ಬಡ್ತಿ:5/2005–06, ದಿನಾಂಕ: 31.01.2006ರನ್ವಯ ಶಿಕ್ಷಣ ಇಲಾಖೆಯಿಂದ ಬಿಡುಗಡೆ ಹೊಂದಿರುತ್ತಾರೆ. ಆದ್ದರಿಂದ ಸದರಿಯವರು ಶಿಕ್ಷಣ ಇಲಾಖೆಯಲ್ಲಿ ದಿನಾಂಕ: 14.08.1993 ರಿಂದ 31.01.2006 ರವರೆಗೆ ಸೇವಾ ಅವಧಿಯನ್ನು ಪೂರೈಸಿದ್ದು, ಇವರ ಹಿಂದಿನ ಸೇವೆಯನ್ನು ಪರಿಗಣಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಶ್ರೀ ಆರ್. ನಾಗರಾಜಶೆಟ್ಟಿ ಇವರ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಸದರಿಯವರ ಮೂಲ ಸೇವಾ ಪುಸ್ತಕದಲ್ಲಿ ದಾಖಲಿಸಿರುವಂತೆ ಇವರು ಈ ಹಿಂದೆ ಅಬಕಾರಿ ಇಲಾಖೆಯಲ್ಲಿ ಸಮಾಜಶಾಸ್ತ್ರ ಉಪನ್ಯಾಸಕರಾಗಿ ಸಲ್ಲಿಸಿದ್ದ ಸೇವೆ ದಿನಾಂಕ: 14.08.1993 ರಿಂದ 31.01.2006ರವರೆಗೆ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಪ್ರಸ್ತುತ ಹುದ್ದೆಯ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 508 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಆರ್. ನಾಗರಾಜಶೆಟ್ಟಿ ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ ಸಮಾಜ

ಶಾಸ್ತ್ರ ಉಪನ್ಯಾಸಕರಾಗಿ ದಿನಾಂಕ: 14.08.1993 ರಿಂದ 31.01.2006 ರವರೆಗೆ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಅವರ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ–7) ರವರ ಟಿಪ್ಪಣಿ ಸಂ: ಆಇ 20 ವೆಚ್ಚ–7/2009, ದಿನಾಂಕ: 03.03.2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1042

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಯೋಜನಾ ಇಲಾಖೆಯ ಕಾರ್ಯನಿರತ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನಿರ್ದೇಶಕರುಗಳಿಗೆ ವೇತನ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:** ಅಧಿಸೂಚನೆ ಸಂಖ್ಯೆ ಸಿಆಸುಇ 35 ಸಅಸೇ 2008, ದಿನಾಂಕ: 4.6.2008.

**ಪ್ರಸ್ತಾವನೆ:**

ಮೇಲೆ ಓದಲಾದ ಅಧಿಸೂಚನೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಯೋಜನಾ ಇಲಾಖೆಯ ಕಾರ್ಯನಿರತ ವಿಭಾಗದಲ್ಲಿ ಜಂಟಿ ನಿರ್ದೇಶಕರುಗಳಾದ ಶ್ರೀ ವೈ.ಬಿ. ಅಕ್ಕಿ ಮತ್ತು ಶ್ರೀ ಎಸ್.ಎ. ಕಾತರಕಿ ಇವರುಗಳಿಗೆ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಲಾಗಿದೆ. ಈ ಅಧಿಕಾರಿಗಳಿಗೆ ವೇತನವನ್ನು ಈ ಕೆಳಕಂಡಂತೆ ನಿಗದಿಪಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 150 ಸಅಸೇ 2009, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2009**

| ಕ್ರ. ಸಂ. | ಅಧಿಕಾರಿಗಳ ಹೆಸರು ಮತ್ತು ಪದನಾಮ | ಜಂಟಿ ನಿರ್ದೇಶಕರ ಹುದ್ದೆಯ ವೇತನ ಶ್ರೇಣಿ ರೂ. 18150–26925 ರಲ್ಲಿ ಪಡೆಯುತ್ತಿರುವ ವೇತನ ಮತ್ತು ದಿನಾಂಕ | ನಿರ್ದೇಶಕರ ಹುದ್ದೆಯಲ್ಲಿ ಕಾರ್ಯವರದಿ ಮಾಡಿ ಕೊಂಡ ದಿನಾಂಕ | ನಿರ್ದೇಶಕರ ಹುದ್ದೆಯಲ್ಲಿ ವೇತನ ಶ್ರೇಣಿ ರೂ. 20025–28275ರಲ್ಲಿ ನಿಗದಿಪಡಿಸಿದ ವೇತನ ಮತ್ತು ದಿನಾಂಕ | ಮುಂದಿನ ವಾರ್ಷಿಕ ವೇತನ ಬಡ್ತಿ ದಿನಾಂಕ |
|---|---|---|---|---|---|
| 1 | ಶ್ರೀ ವೈ.ಬಿ. ಅಕ್ಕಿ ನಿರ್ದೇಶಕರು ಮೌಲ್ಯಮಾಪನ ವಿಭಾಗ | 21,075<br>1–5–2007<br><br>21600<br>1–5–2008ರ ವಾ.ವೇ.ಬ. ಮಂಜೂರಾತಿ | 9–6–2008 (ಪೂರ್ವಾಹ್ನ) | 22125<br>9–6–2008<br>ಕ.ನಾ.ಸೇ. ನಿಯಮ 42(ಬಿ)(1)ರ ಅನ್ವಯ | 1–5–2009 |
| 2 | ಶ್ರೀ ಎಸ್. ಕಾತರಕಿ ನಿರ್ದೇಶಕರು ಪ್ರದೇಶಾಭಿವೃದ್ಧಿ ಮಂಡಳಿ ವಿಭಾಗ | 21,075<br>1–6–2007<br><br>21600<br>1–6–2008ರ ವಾ.ವೇ.ಬ. ಮಂಜೂರಾತಿ | 4–6–2008 (ಪೂರ್ವಾಹ್ನ) | 22125<br>4–6–2008<br>ಕ.ನಾ.ಸೇ.ನಿಯಮ 42(ಬಿ)(1)ರ ಅನ್ವಯ | 1–6–2009 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1043

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3).

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಬಿ.ಟಿ.ಕುಮಾರಸ್ವಾಮಿ, ತಹಶೀಲ್ದಾರ್, ಗ್ರೇಡ್–2, ಪ್ರಸ್ತುತ ತಹಶೀಲ್ದಾರ್, ಬಾಗಲಕೋಟೆ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಕಂಇ 110 ಎಎಸ್‌ಡಿ 2006, ದಿನಾಂಕ: 22.06.2006.
2. ಶ್ರೀ ಬಿ.ಟಿ.ಕುಮಾರಸ್ವಾಮಿ, ಇವರ ಮನವಿ ದಿನಾಂಕ: 12.12.2006.

**ಪ್ರಸ್ತಾವನೆ:**

ಶ್ರೀ ಬಿ.ಟಿ.ಕುಮಾರಸ್ವಾಮಿ ಪರೀಕ್ಷಾರ್ಥ ತಹಶೀಲ್ದಾರ್, ಇವರು ಮೇಲೆ ಓದಲಾದ ದಿನಾಂಕ: 12.12.2006ರಲ್ಲಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ ಸದರಿಯವರು ಹಿಂದೆ ಶಿಕ್ಷಣ ಇಲಾಖೆಯಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರಾಗಿ, ಬಾಗೂರು, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಇಲ್ಲಿ ದಿನಾಂಕ: 01.08.2002 ರಿಂದ ದಿನಾಂಕ: 23.06.2006ರವರೆಗೆ ಶಿಕ್ಷಕರಾಗಿ ಸಲ್ಲಿಸಿರುವುದರಿಂದ ಇವರ ಹಿಂದಿನ ಸೇವೆಯನ್ನು ನಿವೃತ್ತಿ ವೇತನದ ಸೌಲಭ್ಯಕ್ಕಾಗಿ ಪರಿಗಣಿಸುವಂತೆ ಕೋರಿರುತ್ತಾರೆ.

ಸದರಿ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಶ್ರೀಯುತರ ಸೇವಾ ಪುಸ್ತಕದಲ್ಲಿ ದಾಖಲಿಸಿರುವಂತೆ ಶ್ರೀಯುತರು ಶಿಕ್ಷಣ ಇಲಾಖೆಯಲ್ಲಿ ಶಿಕ್ಷಕರಾಗಿ ಸಲ್ಲಿಸಿದ್ದ ದಿನಾಂಕ: 01.08.2002 ರಿಂದ ದಿನಾಂಕ: 23.06.2006ರವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224–ಎ ರೀತ್ಯ ನಿವೃತ್ತ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 14 ಎಎಸ್‌ಡಿ 2007, ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಬಿ.ಟಿ. ಕುಮಾರಸ್ವಾಮಿ ತಹಶೀಲ್ದಾರ್, ಪ್ರಸ್ತುತ ತಹಶೀಲ್ದಾರ್, ಬಾಗಲಕೋಟೆ ತಾಲ್ಲೂಕು, ಇವರು ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ, ಪ್ರಾಥಮಿಕ ಶಿಕ್ಷಕರಾಗಿ ದಿನಾಂಕ: 01.08.2002 ರಿಂದ ದಿನಾಂಕ: 23.06.2006ರವರೆಗೆ ಸಲ್ಲಿಸಲಾಗಿದ್ದ ಸೇವೆಗಳನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224–ಎ ರೀತ್ಯ ಅವರ ಪ್ರಸ್ತುತ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ–7) ರವರ ಟಿಪ್ಪಣಿ ಸಂ: ಆಇ 714 ವೆಚ್ಚ–7/2008, ದಿನಾಂಕ: 22.07.2008 ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 998

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀಮತಿ ಶೈಲಜಾ ಪ್ರಿಯದರ್ಶಿನಿ, ತಹಶೀಲ್ದಾರ್, ಗ್ರೇಡ್–2, ಪ್ರಸ್ತುತ ತಹಶೀಲ್ದಾರ್, ಹೊನ್ನಾಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಕಂಇ 241 ಎಎಸ್‌ಡಿ 2005(1), ದಿನಾಂಕ: 25.01.2006.
2. ಶ್ರೀಮತಿ ಶೈಲಜಾ ಪ್ರಿಯದರ್ಶಿನಿ, ತಹಶೀಲ್ದಾರ್ ಇವರ ಮನವಿ ದಿನಾಂಕ: 09.10.2006.

**ಪ್ರಸ್ತಾವನೆ:**

ಶ್ರೀಮತಿ ಶೈಲಜಾ ಪ್ರಿಯದರ್ಶಿನಿ, ತಹಶೀಲ್ದಾರ್, ಇವರು ಮೇಲೆ ಓದಲಾದ ದಿನಾಂಕ: 09.10.20006 ರಲ್ಲಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ ಸದರಿಯವರು ಹಿಂದೆ ಶಿಕ್ಷಣ ಇಲಾಖೆಯಲ್ಲಿ ಬಾಲಕಿಯರ ಪ್ರೌಢಶಾಲೆ, ಹೊಸಪೇಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇಲ್ಲಿ ದಿನಾಂಕ: 01.06.2002 ರಿಂದ ದಿನಾಂಕ: 30.01.2006ರವರೆಗೆ ಸಂಗೀತ ಶಿಕ್ಷಕರಾಗಿ ಸಲ್ಲಿಸಿರುವುದರಿಂದ ಇವರ ಹಿಂದಿನ ಸೇವೆಯನ್ನು ನಿವೃತ್ತಿ ವೇತನದ ಸೌಲಭ್ಯಕ್ಕಾಗಿ ಪರಿಗಣಿಸುವಂತೆ ಕೋರಿರುತ್ತಾರೆ.

ಸದರಿ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಶ್ರೀಯುತರ ಸೇವಾ ಪುಸ್ತಕದಲ್ಲಿ ದಾಖಲಿಸಿರುವಂತೆ ಶ್ರೀಯುತರು ಶಿಕ್ಷಣ ಇಲಾಖೆಯಲ್ಲಿ ಸಂಗೀತ ಶಿಕ್ಷಕರಾಗಿ ಸಲ್ಲಿಸಿದ್ದ ದಿನಾಂಕ: 01.06.2002 ರಿಂದ 30.01.2006ರ ವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224–ಎ ರೀತ್ಯ ನಿವೃತ್ತ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 280 ಎಎಸ್‌ಡಿ 2006, ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀಮತಿ ಶೈಲಜಾ ಪ್ರಿಯದರ್ಶಿನಿ, ಪ್ರಸ್ತುತ ತಹಶೀಲ್ದಾರ್, ಹೊನ್ನಾಳಿ ತಾಲ್ಲೂಕು, ಇವರು ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ ಸಂಗೀತ ಶಿಕ್ಷಕರಾಗಿ ದಿನಾಂಕ: 01.06.2002 ರಿಂದ ದಿನಾಂಕ: 30.01.2006ರವರೆವಿಗೆ ಸಲ್ಲಿಸಲಾಗಿದ್ದ ಸೇವೆಗಳನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224–ಎ ರೀತ್ಯ ಅವರ ಪ್ರಸ್ತುತ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ–7) ರವರ ಟಿಪ್ಪಣಿ ಸಂ: ಆಇ 30 ವೆಚ್ಚ–7/2008, ದಿನಾಂಕ:14.2.2008 ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 999 **ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಕಾಮಗಾರಿಯ ಗುಣಮಟ್ಟ ನಿಯಂತ್ರಣ ಕಾರ್ಯಪಡೆಯ ವೆಚ್ಚವನ್ನು ಭರಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ.ಲೋಇ/64/ಇಎಪಿ/2008 ಬೆಂಗಳೂರು ದಿನಾಂಕ: 3.11.2008 ಮತ್ತು 26.11.2008.

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶ (1)ರಲ್ಲಿ ಕಾಮಗಾರಿಗಳ ಗುಣಮಟ್ಟ ನಿಯಂತ್ರಣ ಕಾರ್ಯಪಡೆಯನ್ನು ರಚಿಸಿ, ಸದರಿ ಕಾರ್ಯಪಡೆಗೆ ಉಲ್ಲೇಖ ನಿಬಂಧನೆಗಳನ್ನು ನಿಗಧಿಪಡಿಸಲಾಗಿದೆ.

ಸದರಿ ಕಾರ್ಯಪಡೆಯ ಅಧ್ಯಕ್ಷರು ಹಾಗೂ ಸದಸ್ಯರುಗಳಿಗೆ ಸಭೆಗಳಿಗೆ ಹಾಜರಾಗಲು / ಸ್ಥಳತನಿಖೆಗೆ ಹೋಗಿ ಬರಲು ಅವಶ್ಯವಾದ ಭತ್ಯೆಗಳನ್ನು ಒದಗಿಸಬೇಕಾಗಿರುತ್ತದೆ. ಈ ವೆಚ್ಚಗಳಿಗಾಗಿ ಪೂರಕ ಅಂದಾಜಿನಲ್ಲಿ ರೂ.25.00 ಲಕ್ಷಗಳನ್ನು ಒದಗಿಸಲಾಗಿದ್ದು, ಸದರಿ ಮೊತ್ತವನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಮೂಲಕ ಕಾರ್ಯಪಡೆಯ ವೆಚ್ಚಕ್ಕಾಗಿ ಭರಿಸಲು ಸರ್ಕಾರ ತೀರ್ಮಾನಿಸಲಾಗಿದೆ. ಆದ್ದರಿಂದ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಲೋಇ 64 ಇಎಪಿ 2008, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2009**

ಕರ್ನಾಟಕ ರಾಜ್ಯದ ಕಾಮಗಾರಿಯ ಗುಣಮಟ್ಟ ನಿಯಂತ್ರಣಾ ಕಾರ್ಯಪಡೆಯ ವೆಚ್ಚಕ್ಕಾಗಿ ಪೂರಕ ಅಂದಾಜಿನಲ್ಲಿ (ಡಿಮ್ಯಾಂಡ್–20) ಲೆಕ್ಕ ಶೀರ್ಷಿಕೆ 2059–80–001–0–04–051–ಸಾಮಾನ್ಯ ವೆಚ್ಚ (ಯೋಜನೇತರ) ಅಡಿಯಲ್ಲಿ ರೂ.25.00 ಲಕ್ಷಗಳನ್ನು (ರೂ.ಇಪ್ಪತ್ತೈದು ಲಕ್ಷಗಳು ಮಾತ್ರ) ಒದಗಿಸಲಾಗಿದ್ದು, ಈ ಮೊತ್ತವನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಮೂಲಕ ಭರಿಸುವಂತೆ ಸರ್ಕಾರವು ಆದೇಶಿಸಿ, ಸದರಿ ಮೊತ್ತವನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲಾಗಿದೆ.

ಮುಂದುವರೆದು, ನಿಗಮವು ರೂ.25.00 ಲಕ್ಷಗಳ (ರೂ.ಇಪ್ಪತ್ತೈದು ಲಕ್ಷಗಳು ಮಾತ್ರ) ಬಿಲ್ಲನ್ನು, ಕೆ.ಎಫ್.ಸಿ 17 (ಸಿ)4 ರಲ್ಲಿನಂತೆ ಮಹಾಲೇಖಪಾಲಕರು (ಎ ಅಂಡ್ ಇ) ಇವರಿಂದ ಅಥರೈಸೇಷನ್ ಇಲ್ಲದೆಯೇ ಮನ್ನಣೆ ಮಾಡುವುದು ಹಾಗೂ ಸದರಿ ಬಿಲ್ಲಿನ ಮೊತ್ತಕ್ಕೆ ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಎ) ಇವರ ಮೇಲುರುಜು ಮಾಡಿಸುವುದು ಅಲ್ಲದೆ ಈ ಬಿಲ್ಲನ್ನು (ಸ್ವೀಕೃತದ ರಶೀತಿ) ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಆ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ. ಲೋಇ 87 ಆಕೋ–2/2009, ದಿನಾಂಕ: 2.2.2009ರಲ್ಲಿನ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ದೇವಿಪ್ರಸಾದ್**

ಪಿ.ಆರ್. 1000 ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಇಎಪಿ).

## ತಿದ್ದುಪಡಿ ಆದೇಶ

**ವಿಷಯ:** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಹುಡ್ಕೋದಿಂದ ಪಡೆದ ಸಾಲಕ್ಕೆ 2009ನೇ ಮಾರ್ಚ್‌ಗೆ ತ್ರೈಮಾಸಿಕ ಅಸಲು ಮತ್ತು ಬಡ್ಡಿ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಸಮಸಂಖ್ಯೆ. ಆದೇಶ ದಿನಾಂಕ: 17.03.2009.
2. ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಪತ್ರ ಸಂಖ್ಯೆ: ಕೆಆರ್‌ಡಿಸಿಎಲ್/ಎಂ.ಡಿ./ 2008–09/3779 ದಿನಾಂಕ: 21.03.2009.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶ (1)ರಲ್ಲಿ ಹುಡ್ಕೋದಿಂದ ಪಡೆದ ಸಾಲವನ್ನು ಮರುಪಾವತಿಸಲು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ರೂ.22,47,62,688.00/– ಗಳನ್ನು ಬಿಡುಗಡೆ ಮಾಡಲಾಗಿದೆ. ಆದರೆ ಲೆಕ್ಕಶೀರ್ಷಿಕೆ "5054–80–190–0–01–240 (ಯೋಜನೇತರ) ಸಾಲ ಮೇಲುಸ್ತುವಾರಿ" ರ ಅಡಿಯಲ್ಲಿ 2008–09ನೇ ಸಾಲಿಗೆ 134.13 ಕೋಟಿ

ರೂ.ಗಳ ಅನುದಾನವನ್ನು ಒದಗಿಸಲಾಗಿದೆ. ಈ ಅನುದಾನದಲ್ಲಿ ಫೆಬ್ರವರಿ 2009ರ ಅಂತ್ಯದವರೆಗೆ ಸಾಲದ ಮರುಪಾವತಿಗೆ ಒಟ್ಟು ರೂ.111,72,82,511/– ಗಳನ್ನು ಬಿಡುಗಡೆ ಮಾಡಲಾಗಿದೆ. ಸದರಿ ಲೆಕ್ಕಶೀರ್ಷಿಕೆ ಅಡಿಯಲ್ಲಿ ಕೇವಲ ರೂ.22,40,17,489/– ಗಳು ಮಾತ್ರ ಬಾಕಿ ಉಳಿದಿರುತ್ತದೆ. ಆದ್ದರಿಂದ ಮೇಲೆ ಓದಲಾದ ಆದೇಶ (1) ರಲ್ಲಿ ಬಿಡುಗಡೆ ಮಾಡಿರುವ ರೂ.22,47,62,688.00/– ಗಳನ್ನು ತಿದ್ದುಪಡಿ ಮಾಡಿ ರೂ.22,40,17,489/– ಗಳನ್ನು ಬಿಡುಗಡೆ ಮಾಡಬೇಕಿದೆ. ಬಾಕಿ ಉಳಿದ ರೂ.7,45,199/– ಗಳ ಮೊತ್ತವನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವತಿಯಿಂದ ಸದ್ಯಕ್ಕೆ ಪಾವತಿ ಮಾಡಿ ನಂತರ ಸರ್ಕಾರದಿಂದ ಹೆಚ್ಚುವರಿ ಅನುದಾನವಾಗಿ ಮರುಪಾವತಿ ಮಾಡಿಕೊಳ್ಳಲು ಕ್ರಮ ತೆಗೆದುಕೊಳ್ಳಬಹುದಾಗಿದ್ದು, ಕೆಳಗಿನಂತೆ ತಿದ್ದುಪಡಿ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ.ಲೋಇ 11 ಇಎಪಿ 2009, ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2009**

ಹುಡ್ಕೋದಿಂದ ಪಡೆದುಕೊಂಡಿರುವ ಸಾಲದ ಬಾಬತ್ತಿಗೆ 2009ನೇ ಮಾರ್ಚ್‌ಗೆ ಕೊನೆಗೊಳ್ಳುವ ತ್ರೈಮಾಸಿಕ ಅವಧಿಗೆ ಅಸಲು ಹಾಗೂ ಬಡ್ಡಿ ಸೇರಿ ಒಟ್ಟು ರೂ.22,40,17,489/– ಗಳನ್ನು (ಇಪ್ಪತ್ತೆರಡು ಕೋಟಿ ನಲವತ್ತು ಲಕ್ಷದ ಹದಿನೇಳು ಸಾವಿರದ ನಾಲ್ಕುನೂರ ಎಂಬತ್ತೊಂಬತ್ತು ರೂಪಾಯಿಗಳು ಮಾತ್ರ) ಲೆಕ್ಕಶೀರ್ಷಿಕೆ "5054–80–190–0–01–240 (ಯೋಜನೇತರ) ಸಾಲ ಮೇಲುಸ್ತುವಾರಿ" ರ ಅಡಿಯಲ್ಲಿ ಬಿಡುಗಡೆ ಮಾಡಲು ಆದೇಶಿಸಲಾಗಿದೆ.

ಸದರಿ ಬಿಲ್ಲಿನ ಮೊತ್ತಕ್ಕೆ ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಎ) ಇವರ ಮೇಲುರುಜು ಮಾಡಿಸುವುದು ಹಾಗೂ ಈ ಬಿಲ್ಲನ್ನು (ಸ್ವೀಕೃತದ ರಶೀದಿ) ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ದೇವಿಪ್ರಸಾದ್**

ಪಿ.ಆರ್. 1001

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಇಎಪಿ).

**PUBLIC WORKS, PORTS AND INLAND WATER TRANSPORT SECRETARIAT**

**Sub:** Karnataka Industrial Policy 2009-2014.

**Read:** Government Order No. CI 233 SPI 2008, Bangalore, dated 28.2.2009.

**Preamble:**

In Government Order dated 28.02.2009 read above, Government has announced New Industrial Policy 2009-2014. In order to attract new industrial investments to the state various incentives and concessions are offered. The said policy come into force from 1.4.2009.

With regard to 15% price preference allowed vide Para 5.7.3 for the goods maufactured by Micro, Small and Medium Manufacturing Industrial enterprises located in the state in case of purchases by Government Department and State owned Public Sector Units a separate order has to be issued by Public Works, Ports and Inland Water Transport Department. Hence this order.

**Government Order No: PWD 65 PSP 2009, Bangalore, Dated: 21st March 2009**

In the circumstances explained in the preamble, Government is pleased to announce price preference of 15% for the goods manufactured by by Micro, Small and Medium Manufacturing Industrial enterprises located in the state in case of purchases by Public Works, Ports and Inland Water Transport Department.

By Order and in the name of Governor of Karnataka,

**N.S. VISHWANATH**

P.R. 1002

Under Secretary to Government,

Public Works, Ports and Inland Water Transport Department (Ports).

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಟಿ. ಶಿವಮೂರ್ತಿ, ಪಿ.ಸಿ.–769, ಚಿತ್ರದುರ್ಗ ನಗರ, ಚಿತ್ರದುರ್ಗ, ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ, ಇವರ ಆದೇಶ ಸಂಖ್ಯೆ:ಸಿಬ್ಬಂದಿ (2)ಪಿಆರ್/85/2007 ದಿ:20.08.07.

2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ:19/ಅಪೀಲು/ಸಿಬ್ಬಂದಿ/2/2007–08 ದಿನಾಂಕ: 29.10.07.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 16.07.08.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)42/2008–09 ದಿನಾಂಕ:30.12.2008.

**ಪ್ರಸ್ತಾವನೆ:**

ಶ್ರೀ ಟಿ. ಶಿವಮೂರ್ತಿ, ಪಿ.ಸಿ.–769, ಚಿತ್ರದುರ್ಗ ನಗರ ಪೊಲೀಸ್ ಠಾಣೆ, ಇವರು ಚಳ್ಳಕೆರೆ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಘೋರ ದುರ್ನಡತೆ, ನಿರ್ಲಕ್ಷತೆ ಪ್ರದರ್ಶಿಸಿದರೆಂಬ ಕಾರಣಕ್ಕಾಗಿ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆ ಹೊರಿಸಲಾಗಿದೆ.

**ದೋಷರೋಪಣೆ:**

"ಒಬ್ಬ ಜವಾಬ್ದಾರಿಯುತ ಪೊಲೀಸ್ ಸಿಬ್ಬಂದಿಯಾಗಿ ದಿನಾಂಕ: 23.04.2007 ರಂದು ಸಾಯಂಕಾಲ ಕುಡಿದು ಪಾನಮತ್ತರಾಗಿ ತಮ್ಮ ಮೇಲಾಧಿಕಾರಿಗಳೊಂದಿಗೆ ಏರುಧ್ವನಿಯಲ್ಲಿ ಕೂಗಾಡಿ, ಪ್ರಾಣಬೆದರಿಕೆ ಹಾಕಿ, ಅಸಭ್ಯ ರೀತಿಯಿಂದ ವರ್ತಿಸಿ, ಕರ್ತವ್ಯದಲ್ಲಿ ಘೋರ ದುರ್ನಡತೆ ಮತ್ತು ಅತೀವ ಬೇಜವಾಬ್ದಾರಿತನ ಪ್ರದರ್ಶಿಸಿದ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ, ಇವರು ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ: 20.08.07ರ ಆದೇಶದಲ್ಲಿ "ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ಬಡ್ತಿಗೆ ಪರಿಣಾಮ ಬೀರದಂತೆ 06 ತಿಂಗಳ ಕಾಲ ಮುಂದೂಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಆದೇಶಿಸಿದ್ದಾರೆ."

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 29.10.07ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 219 ಪೊಸಿಅ 2008, ಬೆಂಗಳೂರು, ದಿನಾಂಕ: 12ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ. ಕೃಷ್ಣಮೂರ್ತಿ, ಪಿ.ಸಿ.–769, ಚಿತ್ರದುರ್ಗ ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 1003

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಟಿ. ಕೋದಂಡರಾಮ್, ಪೊಲೀಸ್ ಇನ್ಸ್‌ಪೆಕ್ಟರ್, ಶಂಕರಪುರ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು, ಇವರ ಆದೇಶ ಸಂಖ್ಯೆ:ಸಿಬಿ(8)30/2007–08 ದಿ:27.06.2008.
2. ಅರ್ಜಿದಾರರ ಮೇಲ್ಮನವಿ ಅರ್ಜಿ ದಿನಾಂಕ: 25.08.2008.
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(8)30/2007–08 ದಿನಾಂಕ:24.12.2008.

**ಪ್ರಸ್ತಾವನೆ:**

ಶ್ರೀ ಟಿ. ಕೋದಂಡರಾಮ್, ಪೊಲೀಸ್ ಇನ್ಸ್‌ಪೆಕ್ಟರ್, ಶಂಕರಪುರ ಪೊಲೀಸ್ ಠಾಣೆ, ಇವರು ಈ ಹಿಂದೆ ಮಂಡ್ಯ ಪೂರ್ವ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಸಬ್–ಇನ್ಸ್‌ಪೆಕ್ಟರ್, ಆಗಿ ಕರ್ತವ್ಯ ನಿರ್ವಹಿಸುತ್ತಿರುವಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷತೆ, ಬೇಜವಾಬ್ದಾರಿತನ ತೋರಿಸಿದ ಹಿನ್ನೆಲೆಯಲ್ಲಿ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆ ಹೊರಿಸಲಾಗಿದೆ.

**ದೋಷರೋಪಣೆ:**

"ಶ್ರೀ ಟಿ. ಕೋದಂಡರಾಮ್, ಪೊಲೀಸ್ ಇನ್ಸ್‌ಪೆಕ್ಟರ್, ಶಂಕರಪುರ ಪೊಲೀಸ್ ಠಾಣೆ, ಬೆಂಗಳೂರು, ಆದ ನೀವು, ಈ ಹಿಂದೆ ಪಿ.ಎಸ್.ಐ. ಆಗಿ ಮಂಡ್ಯ ಪೂರ್ವ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಶ್ರೀ ಅಸೀಫುಲ್ಲಾ ಎಂಬುವವರು ಅಲಿಜಾನ್ ಎಂಬುವವರ ಭಾವಚಿತ್ರದೊಂದಿಗೆ ಪಾಸ್‌ಪೋರ್ಟ್ ಅರ್ಜಿ ಸಲ್ಲಿಸಿದ್ದು, ಸದರಿ ಪಾಸ್‌ಪೋರ್ಟ್ ಅರ್ಜಿಯ ಬಗ್ಗೆ ಅಗತ್ಯ ದಾಖಲಾತಿಗಳೊಂದಿಗೆ ತಾಳೆ ಮಾಡಿ ವಿವರವಾದ ವಿಚಾರಣೆಯನ್ನು ನಡೆಸಿರುವುದಿಲ್ಲ. ಸದರಿ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸದೆ, ಅಭ್ಯರ್ಥಿಯ ಭಾವಚಿತ್ರವನ್ನು ಮತ್ತು ವ್ಯಕ್ತಿಯನ್ನು ಮಾತ್ರ ನೋಡಿ ಸರಿಯಾಗಿರುತ್ತದೆ. ಪಾಸ್‌ಪೋರ್ಟ್ ನೀಡಬಹುದೆಂದು ಶಿಫಾರಸ್ಸು ಮಾಡಿದ್ದರಿಂದ ಸದರಿಯವರು ದಿ:27.06.2000 ರಂದು ಸುಳ್ಳು ಪಾಸ್‌ಪೋರ್ಟ್ ಸಂಖ್ಯೆ:ಬಿ1989132ನ್ನು ಪಡೆಯಲು ಸಹಕಾರ ನೀಡುವ ಮೂಲಕ ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ ಬೇಜವಾಬ್ದಾರಿತನ, ಅಧಿಕಾರ ದುರುಪಯೋಗ ಮತ್ತು ಕರ್ತವ್ಯ ಲೋಪ ಎಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:27.06.08ರ ಆದೇಶದಲ್ಲಿ ಅರ್ಜಿದಾರರ 'ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವೇತನ ಬಡ್ತಿಗಳ ಮೇಲೆ ದಕ್ಕೆಯಾಗುವಂತೆ ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸಬಹುದಾದ ಯಾವುದೇ ಸಮರ್ಥನೆ ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 302 ಪೊಸಿಅ 2008, ಬೆಂಗಳೂರು, ದಿನಾಂಕ: 9ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ. ಕೋದಂಡರಾಮ್, ಪೊಲೀಸ್ ಇನ್ಸ್‌ಪೆಕ್ಟರ್, ಶಂಕರಪುರ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 1004

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಬಸವರಾಜು, ಎಚ್.ಸಿ.–2708, ಎಚ್.ಎಸ್.ಆರ್. ಲೇಔಟ್, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಕೇಂದ್ರ ವಿಭಾಗ, ಬೆಂಗಳೂರು, ಇವರ ಆದೇಶ ಸಂಖ್ಯೆ:ಡಿಇ/ಆರ್–7/93/ಡಿಸಿಪಿ(ಕೇ)2006 ದಿ:23.01.2007.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ (ಆಡಳಿತ) ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:10/ಅಪೀಲು/2007 ದಿನಾಂಕ: 09.10.2007.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 29.03.2008.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2) 11/2008–09 ದಿನಾಂಕ: 30.12.2008.

**ಪ್ರಸ್ತಾವನೆ:**

ಶ್ರೀ ಬಸವರಾಜು, ಎಚ್.ಸಿ.–2708, ಎಚ್.ಎಸ್.ಆರ್. ಲೇಔಟ್, ಬೆಂಗಳೂರು, ಇವರು ಶೇಷಾದ್ರಿಪುರಂ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ದುರ್ನಡತೆ ಪ್ರದರ್ಶಿಸಿರುವ ಕಾರಣಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆ ಹೊರಿಸಲಾಗಿದೆ.

**ದೋಷರೋಪಣೆ:**

"ದಿ:27.03.06 ರಂದು 5ನೇ ಬಿಟ್‌ನಲ್ಲಿ ಶ್ರೀ ನಾಗರಾಜಯ್ಯ, ಪಿ.ಸಿ.–7377, ರವರೊಂದಿಗೆ ಕರ್ತವ್ಯಕ್ಕೆ ನೇಮಕವಾಗಿದ್ದು ಅಂದು ರಾತ್ರಿ 2.00 ಗಂಟೆ ಸಮಯದಲ್ಲಿ ಲಿಂಕ್ ರಸ್ತೆಯಲ್ಲಿರುವ ಕಟ್ಟಡ ಸಂ.71/1ರಲ್ಲಿ ಶ್ರೀ ಬಡೇಲಾಲ್ ಶರ್ಮ, ಶ್ರೀ ಸೀತಾರಾಮ್ ಶರ್ಮಾ ಎಂಬ ಕಾರ್ಪೆಂಟರುಗಳು ಕೆಲಸ ಮಾಡುತ್ತಿದ್ದಾಗ ಸ್ಥಳಕ್ಕೆ ಹೋದ ನೀವು ಏಕೆ ಈ ಅವೇಳೆಯಲ್ಲಿ ಕೆಲಸ ಮಾಡುತ್ತಿದ್ದೀರಿ. ಅಕ್ಕಪಕ್ಕದವರಿಗೆ ತೊಂದರೆ ಮಾಡುತ್ತೀರಿ ಎಂದು ಹೇಳುತ್ತಾ ಅವರಿಗೆ ಬೆದರಿಕೆ ಹಾಕಿ ವಿನಾ ಕಾರಣ ತೊಂದರೆ ಕೊಡುವ ಉದ್ದೇಶದಿಂದ ಅವರುಗಳನ್ನು ಠಾಣೆಯ ಬಳಿ ಕರೆದುಕೊಂಡು ಹೋಗಿ 800/– ರೂ.ಗಳನ್ನು ನೀಡಬೇಕೆಂದು ಒತ್ತಾಯ ಮಾಡಿ ಕೆಲಸಗಾರರಿಂದ 200/– ರೂ.ಗಳನ್ನು ಪಡೆದಿರುತ್ತೀರಿ. ನಂತರ ದಿ:28.03.06 ರಂದು ಸಂಜೆ 7:00 ಗಂಟೆಗೆ ಕೆಲಸಗಾರರ ಬಳಿ ಹೋಗಿ 600/–ರೂ.ಗಳನ್ನು ನೀಡುವಂತೆ ಒತ್ತಾಯ ಮಾಡಿ, ಇಲ್ಲದಿದ್ದರೆ ನಿಮ್ಮ ವಿರುದ್ಧ ಕೇಸು ದಾಖಲು ಮಾಡಿ ಜೈಲಿಗೆ ಕಳುಹಿಸುವುದಾಗಿ ಬೆದರಿಕೆ ಹಾಕಿರುತ್ತೀರಿ. ಶಿಸ್ತು ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನೀವು ಕೂಲಿ ಕೆಲಸಗಾರರಿಗೆ ವಿನಾ ಕಾರಣ ತೊಂದರೆ ನೀಡಿ ಬೆದರಿಕೆ ಹಾಕಿ ಅಕ್ರಮ ಹಣ ವಸೂಲಿ ಮಾಡಿ ನಿಮ್ಮ ಕರ್ತವ್ಯದಲ್ಲಿ ಅತೀವ ದುರ್ನಡತೆ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಕೇಂದ್ರ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:23.01.2007ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ದಕ್ಕೆಯಾಗದಂತೆ ಒಂದು ವರ್ಷಕಾಲ ಮುಂದೂಡಿ ದಿ:19.04.06 ರಿಂದ 28.11.2006ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಆದೇಶಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ (ಆಡಳಿತ) ಬೆಂಗಳೂರು ನಗರ, ಇವರು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:09.10.2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಹಾಗೂ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸಾಕ್ಷ್ಯಾಧಾರಗಳಿಂದ ಇವರ ವಿರುದ್ಧದ ಆರೋಪ ಸಾಬೀತಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 29 ಪೊಸಿಅ 2009, ಬೆಂಗಳೂರು, ದಿನಾಂಕ: 2ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಸವರಾಜು, ಎಚ್.ಸಿ.–2708, ಎಚ್.ಎಸ್.ಆರ್. ಲೇಔಟ್, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 1005

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ಇಂಧನ ಸಚಿವಾಲಯ**

**ವಿಷಯ:** ಮೆ:: ಗದಗ ಕೋ–ಆಪರೇಟಿವ್ ಇಂಡಸ್ಟ್ರೀಯಲ್ ಎಸ್ಟೇಟ್ ಲಿಮಿಟೆಡ್ ಕಂಪನಿಯವರ ಹಂಚಿಕೆ ಮಾಡಲಾಗಿರುವ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಇ 39 ಎನ್‌ಸಿಇ 95 ದಿನಾಂಕ: 7.2.1997.
2. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 490 ಎನ್‌ಸಿಇ 2008 ದಿನಾಂಕ: 27.12.2008.
3. ಅಭಿವೃದ್ಧಿದಾರರ ಪತ್ರ ಸಂಖ್ಯೆ: ಬಿಸಿಐಇ/99/2008–09 ದಿನಾಂಕ: 5.1.2009.
4. ಸರ್ಕಾರಿ ಪತ್ರ ಸಂಖ್ಯೆ: ಇಎನ್ 490 ಎನ್‌ಸಿಇ 2008 ದಿನಾಂಕ: 7.2.09.
5. ಅಭಿವೃದ್ಧಿದಾರರ ಪತ್ರ ಸಂಖ್ಯೆ : ಜಿಸಿಐಇ/111/2008–09 ದಿನಾಂಕ: 16.2.2009.
6. ಸರ್ಕಾರಿ ಪತ್ರ ಸಂಖ್ಯೆ : ಇಎನ್ 490 ಎನ್‌ಸಿಇ 2008 ದಿನಾಂಕ: 25.2.2009.
7. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಪತ್ರ ಸಂಖ್ಯೆ : ಕೆಆರ್‌ಇಡಿ/08/ಜಿಸಿ–ಒಐಇ/2009/1130 ದಿನಾಂಕ: 4/5.3.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ:: ಗದಗ ಕೋ–ಆಪರೇಟಿವ್ ಇಂಡಸ್ಟ್ರೀಯಲ್ ಎಸ್ಟೇಟ್ ಲಿಮಿಟೆಡ್ ಕಂಪನಿಗೆ ಧಾರವಾಡ ಜಿಲ್ಲೆಯ ಕಪ್ಪಟಗುಡ್ಡ ಎಂಬಲ್ಲಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು. ಸದರಿ ಸರ್ಕಾರಿ ಆದೇಶದನ್ವಯ ಹಾಗೂ ಅಭಿವೃದ್ಧಿದಾರರು ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯ ಪ್ರಕಾರ ಯೋಜನೆಯನ್ನು 3 ವರ್ಷಗಳೊಳಗಾಗಿ ಅನುಷ್ಠಾನಗೊಳಿಸತಕ್ಕದೆಂದು ಷರತ್ತನ್ನು ವಿಧಿಸಲಾಗಿತ್ತು.

ಯೋಜನಾ ಅನುಷ್ಠಾನ ನಿಟ್ಟಿನಲ್ಲಿ ಸದರಿ ಸಂಸ್ಥೆಯು ಸುಮರು 12 ವರ್ಷಗಳಿಂದ ಯಾವುದೇ ಪ್ರಗತಿ ಸಾಧಿಸಿಲ್ಲವಾದ್ದರಿಂದ, ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಸಿಯನ್ನು ನೀಡಲು ಸದರಿ ಕಂಪನಿಗೆ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು.

ಸದರಿ ಕಾರಣ ಕೇಳುವ ನೋಟೀಸಿಗೆ ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 5.1.2009 ರ ಪತ್ರದಲ್ಲಿ ಸದರಿ ಸಂಸ್ಥೆಯು ಉತ್ತರವನ್ನು ನೀಡಿರುತ್ತಾರೆ. ಸದರಿ ಉತ್ತರವನ್ನು ಪರಿಶೀಲಿಸಿದೆ. ಸದರಿ ಸಂಸ್ಥೆಯು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಸಾಧಿಸಿರುವ ಪ್ರಗತಿಯ ಬಗ್ಗೆ ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಪತ್ರದಲ್ಲಿ ಪೂರಕ ದಾಖಲಾತಿಗಳನ್ನು ಒದಗಿಸಲು ಸಂಸ್ಥೆಯನ್ನು ಕೋರಲಾಗಿತ್ತು. ಅದರಂತೆ, ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಸದರಿ ಸಂಸ್ಥೆಯು ಈ ಕೆಳಕಂಡ ದಾಖಲಾತಿಗಳನ್ನು ಒದಗಿಸುತ್ತಾ, ಸರ್ವೆ ಮತ್ತು ಮೈಕ್ರೋ ಸೈಟಿಂಗ್ ಮಾಡಿರುವ ವರದಿಯನ್ನು ನಂತರದಲ್ಲಿ ಕಳುಹಿಸುವುದಾಗಿ ತಿಳಿಸಿದ್ದಾರೆ.

1. ಅಡವಿಸೋಮಾಪುರ, ಪಾಪನಾಶಿ ಹಾಗೂ ಸಿಂಗಟರಾಯನಕೇರಿ ತಾಂಡಾದಲ್ಲಿ ಅರಣ್ಯ ಇಲಾಖೆಯ ವತಿಯಿಂದ ಹಂಚಿಕೆಗೆ ಮಂಜೂರಾಗಿರುವ 13 ಹೆಕ್ಟೇರ್ ಭೂಮಿಗೆ ಸಂಬಂಧಿಸಿದ ದಾಖಲೆ ಪತ್ರಗಳು ಹಾಗೂ ನಕ್ಷೆ.
2. 5.00 ಮೆಗಾ ವ್ಯಾಟ್ ಪವನ ವಿದ್ಯುತ್ ಯೋಜನೆ ಹಂಚಿಕೆಯಾಗಿರುವುದಕ್ಕೆ ಸಂಸ್ಥೆಯಿಂದ ಅರಣ್ಯ ಇಲಾಖೆಗೆ ಪರಿಹಾರಾತ್ಮಕ ನೆಡುತೋಪ ನಡೆಸಲು ಪಾವತಿಸಿದ ವೆಚ್ಚದ ಮೊತ್ತ ರೂ. 7,04,600 ಗಳ ವಿವರಗಳು ಹಾಗೂ 1.00 ಮೆಗಾ ವ್ಯಾಟ್‌ಗೆ ರೂ. 30,000 ರಂತೆ 5.00 ಮೆಗಾ ವ್ಯಾಟ್‌ಗೆ ರೂ. 1,50,000 ಅರಣ್ಯ ಇಲಾಖೆಗೆ ಲೀಸ್ ಬಾಡಿಗೆ ಬಾಬ್ತು ಪಾವತಿಸಿದ ವಿವರ.
3. Consolidated Energy Consultants limited, ಇವರಿಂದ ತಯಾರಿಸಿ ಪಡೆದ ಸಂಕ್ಷಿಪ್ತ ಯೋಜನೆಯ ವರದಿಯ ಉದ್ಧೃತ ಪ್ರತಿ.

ಸದರಿ ಸಂಸ್ಥೆಯು ಒದಗಿಸಿರುವ ದಾಖಲಾತಿಗಳನ್ನು ಪರಿಶೀಲಿಸಿ ಅಭಿಪ್ರಾಯದೊಂದಿಗೆ ವರದಿಯನ್ನು ಕಳುಹಿಸಿಕೊಡುವಂತೆ ವ್ಯವಸ್ಥಾಪಕ ನಿರ್ದೇಶಕರು, ಕ್ರೆಡಲ್ ರವರು ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಪತ್ರದಲ್ಲಿ ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕ್ರೆಡಲ್ ಇವರು ಸದರಿ ಸಂಸ್ಥೆಗೆ ಯೋಜನೆಯು ಹಂಚಿಕೆಯಾಗಿ ಸುಮಾರು 12 ವರ್ಷಗಳು ಕಳೆದರೂ ಯೋಜನೆಯನ್ನು ಅನುಷ್ಠಾನ ಮಾಡಿರುವುದಿಲ್ಲ. ದಾಖಲೆಗಳ ಪ್ರಕಾರ ಮೆ:: ಗದಗ ಕೋ–ಅಪರೇಟಿವ್ ಇಂಡಸ್ಟ್ರೀಯಲ್ ಎಸ್ಟೇಟ್ ಲಿಮಿಟೆಡ್ ಸಂಸ್ಥೆಯು 1ನೇ ಹಂತದ ಅನುಮೋದನೆಯನ್ನು ದಿನಾಂಕ: 20.5.1999 ರಂದು ಅರಣ್ಯೀಕರಣಕ್ಕಾಗಿ ರೂ. 7,04,600 ಗಳನ್ನು ಅರಣ್ಯ ಇಲಾಖೆಗೆ ಪಾವತಿಸಿರುತ್ತಾರೆ. ದಿನಾಂಕ: 28.12.2007 ರಂದು 5 ಮೆಗಾ ವ್ಯಾಟ್‌ಗೆ ಸಂಬಂಧಿಸಿದ ಭೂ ಬಾಡಿಗೆಯನ್ನು ಸಂಸ್ಥೆಯು ನೀಡಿರುತ್ತಾರೆ. ದಿನಾಂಕ: 20.5.1999 ರಂದು ಹಾಗೂ ದಿನಾಂಕ: 28.5.2007 ರಂದು ಕೇಂದ್ರ ಸರ್ಕಾರದ ಪರಿಸರ ಮತ್ತು ಅರಣ್ಯ ಮಂತ್ರಾಲಯವು ಸದರಿ ಯೋಜನೆಗಾಗಿ 13 ಹೆಕ್ಟೇರ್ ಅರಣ್ಯ ಭೂಮಿಯನ್ನು ನೀಡಿರುತ್ತದೆ. ಈ ಎಲ್ಲಾ ಸೌಲಭ್ಯಗಳನ್ನು ಮೆ:: ಗದಗ ಕೋ–ಆಪರೇಟಿವ್ ಇಂಡಸ್ಟ್ರೀಯಲ್ ಎಸ್ಟೇಟ್ ಲಿಮಿಟೆಡ್ ಸಂಸ್ಥೆಯು ಪಡೆದಿದ್ದರೂ ಸಹ ಯೋಜನೆಯು

ಹಂಚಿಕೆಯಾಗಿ 12 ವರ್ಷಗಳು ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಂಸ್ಥೆಯು ಸಾಧಿಸಿರುವುದಿಲ್ಲವಾದ್ದರಿಂದ, ಹಂಚಿಕೆ ಆದೇಶವನ್ನು ರದ್ದು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೆ:: ಗದಗ ಕೋ–ಅಪರೇಟಿವ್ ಇಂಡಸ್ಟ್ರೀಯಲ್ ಎಸ್ಟೇಟ್ ಲಿಮಿಟೆಡ್ ಕಂಪನಿಯು 1997ನೇ ಸಾಲಿನಲ್ಲಿ ಹಂಚಿಕೆ ಆದೇಶ ಪಡೆದಿದ್ದು, 3 ವರ್ಷದೊಳಗೆ ಯೋಜನೆಯನ್ನು ಅನುಷ್ಠಾನಗೊಳಿಸುವಂತೆ ಷರತ್ತುಗಳನ್ನು ವಿಧಿಸಲಾಗಿದ್ದರೂ ಸಹ, ಸದರಿ ಸಂಸ್ಥೆಗೆ ಯೋಜನೆಯು ಹಂಚಿಕೆಯಾಗಿ ಸುಮಾರು 12 ವರ್ಷಗಳು ಕಳೆದರೂ ಇದುವರೆವಿಗೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೆ ಇರುವುದನ್ನು ಸರ್ಕಾರ ಗಮನಿಸಿ, ಸದರಿ ಸಂಸ್ಥೆಗೆ ಈ ಯೋಜನೆಯ ಅನುಷ್ಠಾನದಲ್ಲಿ ಆಸಕ್ತಿ ಇರುವುದಿಲ್ಲ ಎಂದು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 490 ಎನ್‌ಸಿಇ 2008, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 39 ಎನ್‌ಸಿಇ 95 ದಿನಾಕ: 7.2.1997 ರಲ್ಲಿ ಮೆ:: ಗದಗ ಕೋ–ಆಪರೇಟಿವ್ ಇಂಡಸ್ಟ್ರೀಯಲ್ ಎಸ್ಟೇಟ್ ಲಿಮಿಟೆಡ್ ಕಂಪನಿಗೆ ಧಾರವಾಡ ಜಿಲ್ಲೆಯ (ಈಗ ಗದಗ ಜಿಲ್ಲೆ) ಕಪ್ಪಟಗುಡ್ಡ ಎಂಬಲ್ಲಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಅನುಮತಿಸಲಾದ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1006

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ENERGY SECRETARIAT**

**CORRIGENDUM**

**No. EN 65 NCE 2009, Bangalore, Dated: 24th March 2009**

The words **"Subject to condition that company will commission the project by June 2009 and supply the entire power to the State Grid"** appearing in first para of the Order portion of the Government Order No: EN 65 NCE 2009 dated: 13.3.2009 is deleted.

By Order and in the name of Governor of Karnataka,

P.R. 1007

**S.J. SAMPATH KUMAR**

Under Secretary to Government, Energy Department.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀಮತಿ ಡಾ:ಕೆ.ದಾಕ್ಷಾಯಿಣಿ, ತಹಶೀಲ್ದಾರ್, ಗ್ರೇಡ್–2, ಪ್ರಸ್ತುತ ತಹಶೀಲ್ದಾರ್, ಬಂಗಾರಪೇಟೆ ತಾಲ್ಲೂಕು, ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಕಂಇ 110 ಎಎಸ್‌ಡಿ 2006, ದಿನಾಂಕ: 22.06.2006.
2. ಶ್ರೀಮತಿ ಡಾ:ಕೆ.ದಾಕ್ಷಾಯಿಣಿ, ತಹಶೀಲ್ದಾರ್, ಇವರ ಮನವಿ ದಿನಾಂಕ: 31.05.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ:(1), ದಿನಾಂಕ: 22.06.2006ರ ಅಧಿಸೂಚನೆಯಲ್ಲಿ, ಶ್ರೀಮತಿ ಡಾ:ಕೆ.ದಾಕ್ಷಾಯಿಣಿ, ಇವರು ಕಂದಾಯ ಇಲಾಖೆಯ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿಗೊಂಡಿರುತ್ತಾರೆ. ಸದರಿಯವರು ಈ ಹುದ್ದೆಗೆ, ಸೇರುವ ಪೂರ್ವದಲ್ಲಿ ಆರೋಗ್ಯ ಇಲಾಖೆಯಲ್ಲಿ, ವೈದ್ಯಾಧಿಕಾರಿಯಾಗಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಕಗ್ಗಲೀಪುರ, ಬೆಂಗಳೂರು ನಗರ ಜಿಲ್ಲೆ ಇಲ್ಲಿ ದಿನಾಂಕ: 02.09.2002 ರಿಂದ 04.07.2006ರವರೆಗೆ ಸಲ್ಲಿಸಿದ ಸೇವೆಯನ್ನು ಪಿಂಚಣಿ ಮಂಜೂರಾತಿಗೆ ಪರಿಗಣಿಸಲು ಕೋರಿ ಮೇಲೆ ಓದಲಾದ ಕ್ರ.ಸಂ:(2) ರ ಪ್ರಸ್ತಾವನೆಯಲ್ಲಿ ಸದರಿಯವರು ಕಂದಾಯ ಇಲಾಖೆಯಲ್ಲಿ ಸೇವೆ ಪ್ರಾರಂಭಿಸುವ ಪೂರ್ವದಲ್ಲಿ ಆರೋಗ್ಯ ಇಲಾಖೆಯಲ್ಲಿ, ವೈದ್ಯಾಧಿಕಾರಿಯಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ತದನಂತರ ದಿನಾಂಕ: 04.07.2006ರಂದು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಅಧಿಕೃತ ಜ್ಞಾಪನದ ಸಂ: ಸಿಬ್ಬಂದಿ(1):8:07–07ರನ್ವಯ ಆರೋಗ್ಯ ಇಲಾಖೆಯಿಂದ ಬಿಡುಗಡೆ ಹೊಂದಿರುವುದಾಗಿ, ಆದ್ದರಿಂದ ಅವರು ಆರೋಗ್ಯ ಇಲಾಖೆಯಲ್ಲಿ ದಿನಾಂಕ: 02.09.2002 ರಿಂದ 04.07.2006ರ ವರೆಗಿನ ಸೇವಾ ಅವಧಿಯನ್ನು ಪೂರೈಸಿದ್ದು, ಹಿಂದಿನ ಸೇವೆಯನ್ನು ಪರಿಗಣಿಸವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಶ್ರೀಮತಿ ಕೆ.ದಾಕ್ಷಾಯಿಣಿ ತಹಶೀಲ್ದಾರ್ ಇವರ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಸದರಿಯವರ ಮೂಲ ಸೇವೆ ಪುಸ್ತಕದಲ್ಲಿ ದಾಖಲಿಸಿರುವಂತೆ ಶ್ರೀಮತಿ ಕೆ.ದಾಕ್ಷಾಯಿಣಿ, ತಹಶೀಲ್ದಾರ್, ಬಂಗಾರಪೇಟೆ ತಾಲ್ಲೂಕು, ಕೋಲಾರ ಜಿಲ್ಲೆ ಇವರ ಈ ಹಿಂದೆ ಆರೋಗ್ಯ ಇಲಾಖೆಯಲ್ಲಿ, ಸಲ್ಲಿಸಿದ್ದ ಸೇವೆ ದಿನಾಂಕ: 23.02.2001 ರಿಂದ

25.06.2006ರವರೆಗಿನ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 90 ಎಎಸ್‌ಡಿ 2007, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀಮತಿ ಕೆ.ದಾಕ್ಷಾಯಿಣಿ, ತಹಶೀಲ್ದಾರ್, ಬಂಗಾರಪೇಟೆ ತಾಲ್ಲೂಕು, ಕೋಲಾರ ಜಿಲ್ಲೆ ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ಆರೋಗ್ಯ ಇಲಾಖೆಯಲ್ಲಿ, ವೈದ್ಯಾಧಿಕಾರಿಯಾಗಿ ದಿನಾಂಕ: 02.09.2002 ರಿಂದ 04.07.2006 ರವರೆಗೆ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಅವರ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ. ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮ 41ಎ(1) ಹಾಗೂ ನಿಯಮ 20ರಡಿಯ ಟಿಪ್ಪಣಿ 4ರ ರೀತ್ಯ ವೇತನ ನಿಗದಿಪಡಿಸುವಂತೆ ಸಹಾ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ 7) ರವರ ಟಿಪ್ಪಣಿ ಸಂ: ಆಇ 220 ವೆಚ್ಚ–7/2008, ದಿನಾಂಕ: 04.04.2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1008

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಜಿ.ಹೆಚ್. ನಾಗಹನುಮಯ್ಯ, ಹಿಂದಿನ ತಹಶೀಲ್ದಾರ್, ದಾವಣಗೆರೆ ತಾಲ್ಲೂಕು, ಪ್ರಸ್ತುತ ಸಹಾಯಕ ನಿರ್ದೇಶಕರು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು ಇವರ ವಿರುದ್ಧ ಇಲಾಖಾ ವಿಚಾರಣೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶದ ಸಂ: ಕಂಇ 55 ಎಡಿಇ 2008, ದಿನಾಂಕ: 20.11.2008.
2. ಸರ್ಕಾರದ ಆದೇಶದ ಸಂ: ಕಂಇ 79 ಎಟಿಎಸ್ 2008 (ಭಾಗ), ದಿನಾಂಕ: 31.12.2008.
3. ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರ ಪ್ರಸ್ತಾವನೆ ಸಂ:ಸಿಸಿಎ/ಸಿಆರ್/7/2008–09, ದಿನಾಂಕ: 15.01.2009.

**ಪ್ರಸ್ತಾವನೆ:**

ದಿನಾಂಕ: 17.11.2008ರಂದು ಮಾನ್ಯ ಕಂದಾಯ ಸಚಿವರು, ದಾವಣಗೆರೆ ತಾಲ್ಲೂಕು ಕಛೇರಿಗೆ ಭೇಟಿ ನೀಡಿದ ಸಂದರ್ಭದಲ್ಲಿ, ತಹಶೀಲ್ದಾರ್ ಕಛೇರಿಯನ್ನು ತಪಾಸಣೆ ನಡೆಸಿದ್ದು, ತಪಾಸಣೆ ಸಮಯದಲ್ಲಿ ಶ್ರೀ ನಾಗಹನುಮಯ್ಯ, ತಹಶೀಲ್ದಾರ್ ಇವರು ಕಛೇರಿ ಆಡಳಿತವನ್ನು ಪರಿಣಾಮಕಾರಿಯಾಗಿ ಹಾಗೂ ಸಮರ್ಪಕವಾಗಿ ನಿರ್ವಹಿಸದೇ ಇರುವುದು ಅಲ್ಲದೇ, ಪಿಂಚಣಿ ಸೌಲಭ್ಯಗಳಾದ ವೃದ್ಧಾಪ್ಯ ವೇತನ, ಅಂಗವಿಲಕರ ವೇತನ, ವಿಧವಾ, ವೇತನ ಸಾಮಾಜಿಕ ಭದ್ರತಾ ಯೋಜನೆ, ಸಂಧ್ಯಾ ಸುರಕ್ಷಾ ಯೋಜನೆಗಳನ್ನು ಸಾರ್ವಜನಿಕರಿಗೆ ತಲುಪಿಸುವಲ್ಲಿ ವಿಫಲರಾಗಿ ಕರ್ತವ್ಯ ಚ್ಯುತಿ ಎಸಗಿರುವುದು ಮೇಲ್ನೋಟಕ್ಕೆ ಕಂಡುಬರುತ್ತಿದ್ದ ಹಿನ್ನೆಲೆಯಲ್ಲಿ, ಮೇಲೆ ಓದಲಾದ ಕ್ರ.ಸಂ.(1)ರ ದಿನಾಂಕ: 20.11.2008ರ ಆದೇಶದಲ್ಲಿ ಶ್ರೀ ಜಿ.ಹೆಚ್. ನಾಗಹನುಮಯ್ಯ, ತಹಶೀಲ್ದಾರ್, ದಾವಣಗೆರೆ ತಾಲ್ಲೂಕು ಇವರ ವಿರುದ್ಧ ಶಿಸ್ತು ಕ್ರಮ ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾನುಸಾರ 1957ರ ನಿಯಮ 10ರನ್ವಯ, ಅವರನ್ನು ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಲ್ಲಿ ಇರಿಸಿ, ಆದೇಶಿಸಲಾಗಿತ್ತು.

ಜಿಲ್ಲಾಧಿಕಾರಿ, ದಾವಣಗೆರೆ ಜಿಲ್ಲೆ ಇವರು ಸರ್ಕಾರಕ್ಕೆ ವರದಿ ಸಲ್ಲಿಸಿ, ಸಿಬ್ಬಂದಿಯ ಕೊರತೆಯಿಂದ ಅರ್ಜಿಗಳನ್ನು ವಿಲೇ ಮಾಡುವಲ್ಲಿ ವಿಳಂಬವಾಗಿದ್ದು, ಈಗ ಬಾಕಿ ಇರುವ ಅರ್ಜಿಗಳನ್ನು ವಿಲೇ ಮಾಡಿರುವುದರಿಂದ, ಶ್ರೀ ನಾಗಹನುಮಯ್ಯ ಒಬ್ಬ ದಕ್ಷ ಅಧಿಕಾರಿಯಾಗಿರುವುದರಿಂದ ಅವರ ಅಮಾನತ್ತು ತೆರವುಗೊಳಿಸುವಂತೆ ಶಿಫಾರಸ್ಸು ಮಾಡಿದ್ದಾರೆ. ಈ ವಿಷಯವನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿ, ಇವರನ್ನು ಮೇಲೆ ಓದಲಾದ ಕ್ರ.ಸಂ.(2)ರ ದಿನಾಂಕ: 31.2.2008ರಲ್ಲಿ ಅಮಾನತ್ತಿನಿಂದ ಬಿಡುಗಡೆಗೊಳಿಸಿ ಸದರಿಯವರನ್ನು ಗದಗ್ ಜಿಲ್ಲೆಯ ರೋಣ ತಾಲ್ಲೂಕಿನಲ್ಲಿ ಖಾಲಿಯಿರುವ ತಹಶೀಲ್ದಾರ್ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ. (3)ರ ದಿನಾಂಕ: 15.01.2009 ರಲ್ಲಿ ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರು ಸರ್ಕಾರಕ್ಕೆ ವಿವರವಾದ ವರದಿಯನ್ನು ಸಲ್ಲಿಸಿ, ಸಿಬ್ಬಂದಿಯ ಕೊರತೆಯಿಂದ ಅರ್ಜಿಗಳನ್ನು ವಿಲೇ ಮಾಡುವಲ್ಲಿ ವಿಳಂಬವಾಗಿದ್ದು, ಪ್ರಸ್ತುತ ಈಗ ಬಾಕಿಯಿರುವ ಅರ್ಜಿಗಳನ್ನು ಇತ್ಯರ್ಥಪಡಿಸಿರುವುದಾಗಿ ಹಾಗೂ ಈ ಹಿಂದೆ ತಿರಸ್ಕರಿಸಿದ ಪ್ರಕರಣಗಳು ಪುನಃ ಬರುತ್ತಿದ್ದು, ಅತೀ ಹೆಚ್ಚು ಪ್ರಮಾಣದಲ್ಲಿ ಇತರೇ ಶಾಖೆಯ ಅರ್ಜಿಗಳು ಸ್ವೀಕೃತವಾಗುತ್ತಿರುವುದು ಹಾಗೂ ಅದೇ ಪ್ರಮಾಣದಲ್ಲಿ

ವಿಲೇವಾರಿ ಆಗುತ್ತಿರುವುದು ಕಂಡು ಬಂದಿರುತ್ತದೆ. ಈ ರೀತಿ ಅತೀ ಹೆಚ್ಚು ಪ್ರಮಾಣದಲ್ಲಿ ಕಛೇರಿಯಲ್ಲಿ ಸ್ವೀಕೃತವಾದ ಅರ್ಜಿಗಳು ವಿಲೇವಾರಿಗಾಗಿ ನೌಕರರು ಕೆಲಸದ ಅವಧಿ ಮುಗಿದ ನಂತರ ಹಾಗೂ ರಜಾ ದಿನಗಳಲ್ಲಿ ಕೆಲಸ ಮಾಡಿದರೂ ಸಹ ಮೇಲ್ಕಂಡ ಕಾರಣಗಳಿಂದ ಕೆಲಸದ ಪ್ರಗತಿಯಲ್ಲಿ ಅಲ್ಲಲ್ಲಿ ಸಣ್ಣ ದೋಷಗಳು ಕಂಡು ಬಂದಿರುತ್ತವೆ ಎಂದು ಈ ಹಿನ್ನೆಲೆಯಲ್ಲಿ ನೌಕರರ ಮನಃಸ್ಥೈರ್ಯ ಹೆಚ್ಚಿಸಲು ಹಾಗೂ ಇನ್ನೂ ಹೆಚ್ಚು ಕಾಳಜಿಯಿಂದ ಹಾಗೂ ಜವಾಬ್ದಾರಿಯಿಂದ ಕೆಲಸ ಮಾಡಲು ಅವಕಾಶ ಮಾಡಿಕೊಡುವಂತೆ ಕೋರಿ, ಸದರಿ ನೌಕರರ ಮೇಲೆ ಕರ್ತವ್ಯ ಲೋಪದ ಬಗ್ಗೆ ಇಲಾಖಾ ವಿಚಾರಣೆ ಪ್ರಕ್ರಿಯೆಯನ್ನು ಕೈಬಿಟ್ಟು, ಇನ್ನು ಮುಂದೆ ಈ ತರಹದ ಲೋಪದೋಷಗಳಿಗೆ ಅವಕಾಶ ನೀಡದಂತೆ, ಎಚ್ಚರಿಕೆಯನ್ನು ನೀಡಿ ಪ್ರಕರಣವನ್ನು ಮುಕ್ತಾಯಗೊಳಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಅವರ ವರದಿಯನ್ನು ಒಪ್ಪಿ ಶ್ರೀ ಜಿ.ಹೆಚ್. ನಾಗಹನುಮಯ್ಯ, ಹಿಂದಿನ ತಹಶೀಲ್ದಾರ್, ದಾವಣಗೆರೆ ಇನ್ನು ಮುಂದೆ ಸಾರ್ವಜನಿಕ ಕೆಲಸಗಳನ್ನು ಆಸಕ್ತಿಯಿಂದ ನಿರ್ವಹಿಸಲು ಎಚ್ಚರಿಕೆ ನೀಡಿ ಅವರ ವಿರುದ್ಧ ಹೂಡಲು ಉದ್ದೇಶಿಸಲಾಗಿದ್ದ ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 55 ಎಡಿಇ 2008, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಜಿ.ಹೆಚ್. ನಾಗಹನುಮಯ್ಯ, ಹಿಂದಿನ ತಹಶೀಲ್ದಾರ್, ದಾವಣಗೆರೆ ಪ್ರಸ್ತುತ ಸಹಾಯಕ ನಿರ್ದೇಶಕರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು ಇವರಿಗೆ ಇನ್ನು ಮುಂದೆ ಸಾರ್ವಜನಿಕ ಕೆಲಸಗಳನ್ನು ಆಸಕ್ತಿಯಿಂದ ನಿರ್ವಹಿಸಲು ಎಚ್ಚರಿಕೆ ನೀಡಿ ಅವರ ವಿರುದ್ಧ ಹೂಡಲು ಉದ್ದೇಶಿಸಲಾಗಿದ್ದ ಇಲಾಖಾ ವಿಚಾರಣೆಯಿಂದ ಈ ಪ್ರಕರಣದ ಮಟ್ಟಿಗೆ ಕೈಬಿಟ್ಟು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1009

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಯಲ್ಲಿನ ಸರ್ಕಾರೀ ಜಮೀನುಗಳ ಅತಿಕ್ರಮಣ ಮತ್ತು ಒತ್ತುವರಿ ಪತ್ತೆ ಹಚ್ಚಲು ಎನ್‌ಫೋರ್ಸ್‌ಮೆಂಟ್ ಸೆಲ್‌ಗೆ (ಅನಧಿಕೃತ ಕಟ್ಟಡಗಳ ನಿರ್ಮಾಣ ತಡೆ ಕೋಶ) ತಾತ್ಕಾಲಿಕವಾಗಿ ಹುದ್ದೆಗಳನ್ನು ಸೃಜಿಸಿದ್ದು, ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರ ಪತ್ರ ಸಂ: ಪಿಯುಸಿ(ಜಾದ)ಸಿಬ್ಬಂದಿ:ಸಿಆರ್:13/07–08, ದಿನಾಂಕ: 20.01.2009.
2. ಸರ್ಕಾರದ ಆದೇಶದ ಸಂ: ಕಂಇ 77 ಎಎಸ್‌ಡಿ 2008, ದಿನಾಂಕ: 26.04.2008 ಮತ್ತು 28.06.2008.
3. ಸರ್ಕಾರದ ಆದೇಶ ಸಂ: ಕಂಇ 23 ಬಿಎಂಎಂ 2007, ದಿನಾಂಕ: 24.02.2007.

**ಪ್ರಸ್ತಾವನೆ:**

ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಆದೇಶ ಸಂ: ಕಂಇ 77 ಎಎಸ್‌ಡಿ 2008, ದಿನಾಂಕ:26.04.2008 ಮತ್ತು 28.06.2008ರ ಆದೇಶದಲ್ಲಿ (1) ತಹಶೀಲ್ದಾರ್–2 ಹುದ್ದೆಗಳು, (2) ಶಿರಸ್ತೇದಾರ್/ವ್ಯವಸ್ಥಾಪಕರು–2 ಹುದ್ದೆಗಳನ್ನು ದಿನಾಂಕ: 01.02.2008 ರಿಂದ 02.02.2009ರವರೆಗೆ ಮತ್ತು ರಿ–ಡಿಪ್ಲಾಯ್‌ಮೆಂಟ್ ಮೂಲಕ ಕಾರ್ಯ ನಿರ್ವಹಿಸುತ್ತಿರುವ (1) ಶಿರಸ್ತೇದಾರ್ – 5 ಹುದ್ದೆಗಳು, (2) ಪ್ರ.ದ.ಸ.–7 ಹುದ್ದೆಗಳು, (3) ದ್ವಿ.ದ.ಸ – 1 ಹುದ್ದೆ ಇವುಗಳನ್ನು ದಿನಾಂಕ: 29.01.2008 ರಿಂದ 28.01.2009ರವರೆಗೆ ಮೇಲ್ಕಂಡ ಸೃಜಿಸಲಾದ ಹುದ್ದೆಗಳನ್ನು ಮುಂದುವರೆಸಲಾಗಿತ್ತು. ಮತ್ತು ಮೇಲೆ ಓದಲಾದ (3)ರ ಆದೇಶದಲ್ಲಿ ಸಹಾಯಕ ಆಯುಕ್ತರ 2 ಹುದ್ದೆಗಳಲ್ಲಿ ಒಂದು ಹುದ್ದೆ ಖಾಲಿಯಿದ್ದು, ಇನ್ನೊಂದು ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಪ್ರಸ್ತುತ ಅನಧಿಕೃತ ಕಟ್ಟಡಗಳ ನಿರ್ಮಾಣ ತಡೆಕೋಶ (ಎನ್‌ಫೋರ್ಸ್‌ಮೆಂಟ್‌ಸೆಲ್)ದಲ್ಲಿ ಬೆಂಗಳೂರು ಸುತ್ತ ಮುತ್ತಲಿನ ಬೆಲೆ ಬಾಳುವ ಸರ್ಕಾರಿ ಜಮೀನುಗಳ ಒತ್ತುವರಿ ಪ್ರಕರಣಗಳನ್ನು ಪತ್ತೆ ಹಚ್ಚಿ ಒತ್ತುವರಿ ಜಮೀನು ತೆರವುಗೊಳಿಸುವ ಕಾರ್ಯವನ್ನು ಸಮಾರೋಪಾದಿಯಲ್ಲಿ ಮಾಡಲಾಗುತ್ತಿದೆ. ನಿರಂತರವಾಗಿ ಅತಿ ಕ್ರಮಣ ತಡೆ, ಒತ್ತುವರಿ ತೆರವುಗೊಳಿಸುವ ಮೊಕದ್ದಮೆಯನ್ನು ಹೂಡಿ ಸರ್ಕಾರೀ ಸ್ವತ್ತನ್ನು ಉಳಿಸಿಕೊಳ್ಳುವ ಬಗ್ಗೆ ಹಾಗೂ ಹೆಚ್ಚಿನ ಕಾರ್ಯ ಇರುವುದರಿಂದ, ಹುದ್ದೆಗಳನ್ನು ಮುಂದುವರೆಸುವ ಅವಶ್ಯಕತೆ ಇರುತ್ತದೆ. ಮುಂದುವರೆದು, ಇನ್ನು 23760–00 ಎಕರೆ ಜಮೀನನ್ನು ಒತ್ತುವರಿಯಿಂದ ತೆರವುಗೊಳಿಸಲು ಬಾಕಿ ಇದ್ದು, ಈ ಜಮೀನುಗಳನ್ನು ಒತ್ತುವರಿಯಿಂದ ತೆರವುಗೊಳಿಸಲು, ತೆರವುಗೊಳಿಸಿದ ಜಮೀನುಗಳನ್ನು ಹರಾಜು ಮಾಡಬೇಕಾಗಿರುವುದರಿಂದ ಈಗಾಗಲೇ ಸೃಜಿಸಿರುವ ಹುದ್ದೆಗಳನ್ನು ಇನ್ನು 2 ವರ್ಷಕ್ಕೆ ಮುಂದುವರೆಸಿ ಆದೇಶಿಸಲು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಕೋರಿರುವಂತೆ, ಇನ್ನು 1 ವರ್ಷದವರೆಗೆ ಹುದ್ದೆಗಳನ್ನು ಮುಂದುವರೆಸಬೇಕಾಗಿರುವುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂ: ಕಂಇ 134 ಎಎಸ್‌ಡಿ 2009, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಯಲ್ಲಿನ ಸರ್ಕಾರಿ ಜಮೀನುಗಳ ಅತಿಕ್ರಮಣ ಮತ್ತು ಒತ್ತುವರಿ ಪತ್ತೆಹಚ್ಚಿ ಭೂ ಕಬಳಿಕೆ ವಿರುದ್ಧ ಕ್ರಮ ಜರುಗಿಸಲು ಹಾಗೂ ತೆರವುಗೊಳಿಸಿದ ಜಮೀನುಗಳನ್ನು ಹರಾಜು ಮಾಡಲು ಅನಧಿಕೃತ ಕಟ್ಟಡ ನಿರ್ಮಾಣ ತಡೆಕೋಶ (ಎನ್‌ಫೋರ್ಸ್‌ಮೆಂಟ್ ಸೆಲ್), ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ಇಲ್ಲಿಗೆ ಈ ಕೆಳಕಂಡಂತೆ ಒಂದು ವರ್ಷದವರೆಗೆ ಹುದ್ದೆಗಳನ್ನು ಮುಂದುವರೆಸಿ ಆದೇಶಿಸಲಾಗಿದೆ.

**1) ತಾತ್ಕಾಲಿಕವಾಗಿ ಸೃಜಿಸಲಾಗಿರುವ – ದಿನಾಂಕ: 03.02.2009 ರಿಂದ 02.02.2010 ರವರೆಗೆ**

| | |
|---|---|
| **ತಹಶೀಲ್ದಾರ್** | **2 ಹುದ್ದೆಗಳು** |
| **ಶಿರಸ್ತೇದಾರ್/ ಮ್ಯಾನೇಜರ್** | **2 ಹುದ್ದೆಗಳು** |

**2) ರಿ–ಡಿಪ್ಲಾಯ್‌ಮೆಂಟ್‌ನಲ್ಲಿ ಕಾರ್ಯ ನಿರ್ವಹಿಸುತ್ತಿರುವ– 29.01.2009 ರಿಂದ 28.01.2010 ರವರೆಗೆ**

| | |
|---|---|
| **ಸಹಾಯಕ ಆಯುಕ್ತರು** | **2 ಹುದ್ದೆಗಳು** |
| **ಶಿರಸ್ತೇದಾರ್** | **5 ಹುದ್ದೆಗಳು** |
| **ಪ್ರಥಮ ದರ್ಜೆ ಸಹಾಯಕರು** | **7 ಹುದ್ದೆಗಳು** |
| **ದ್ವಿತೀಯ ದರ್ಜೆ ಸಹಾಯಕರು** | **1 ಹುದ್ದೆ** |

ಈ ಆದೇಶವನ್ನು ಸರ್ಕಾರದ ಆದೇಶ ಸಂ: ಎಫ್‌ಡಿ 01 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ನೀಡಿದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1010

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಡಾ: ಬಿ. ಉದಯಕುಮಾರ್‌ಶೆಟ್ಟಿ, ತಹಶೀಲ್ದಾರ್ ಗ್ರೇಡ್–2, ಪ್ರಸ್ತುತ ತಹಶೀಲ್ದಾರ್, ಅಂಕೋಲಾ ತಾಲ್ಲೂಕು ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ: ಕಂಇ 08 ಎಟಿಎಸ್ 2006, ದಿನಾಂಕ: 15.04.2006.

2. ಡಾ: ಉದಯಕುಮಾರ್ ಶೆಟ್ಟಿ ಇವರ ಮನವಿ ದಿನಾಂಕ: 07.03.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1), ದಿನಾಂಕ: 15.04.2006ರ ಅಧಿಸೂಚನೆಯಲ್ಲಿ, ಡಾ:ಉದಯಕುಮಾರ್ ಶೆಟ್ಟಿ ಇವರು ಕಂದಾಯ ಇಲಾಖೆಯ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿಗೊಂಡಿರುತ್ತಾರೆ. ಸದರಿಯವರು ಈ ಹುದ್ದೆಗೆ, ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ, ರಾಜ್ಯ ಶಾಸ್ತ್ರ ಉಪನ್ಯಾಸಕರಾಗಿ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬಾರಕೂರು, ಉಡುಪಿ ಜಿಲ್ಲೆ, ಇಲ್ಲಿ ದಿನಾಂಕ: 19.08.1992 ರಿಂದ 27.04.2006ರವರೆಗೆ ಸಲ್ಲಿಸಿದ ಸೇವೆಯನ್ನು ಪಿಂಚಣಿ ಮಂಜೂರಾತಿಗೆ ಪರಿಗಣಿಸಲು ಕೋರಿರುತ್ತಾರೆ. ಸದರಿಯವರು ಶ್ರೀಮತಿ ರುಕ್ಮಿಣಿ ಶೆಡ್ತಿ ಸ್ಮಾರಕ ನ್ಯಾಷನಲ್ ಸರಕಾರಿ ಪ್ರಥಮ ದರ್ಜೆ ಕಾಲೇಜು, ಬಾರಕೂರು ಇವರ ಜ್ಞಾಪನ ಪತ್ರದ ಸಂ: ಶ್ರೀ.ರು.ಶೆ.ನ್ಯಾ.ಸ.ಕಾರವಾರ 41/2006–07, ದಿನಾಂಕ: 27.04.2006ರನ್ವಯ ಬಿಡುಗಡೆ ಹೊಂದಿರುತ್ತಾರೆ. ಆದ್ದರಿಂದ ಶ್ರೀಯುತರು ಶಿಕ್ಷಣ ಇಲಾಖೆಯಲ್ಲಿ ದಿನಾಂಕ: 19.08.1992 ರಿಂದ 27.04.2006ರವರೆಗೆ ಸೇವಾ ಅವಧಿಯನ್ನು ಪೂರೈಸಿದ್ದು, ಇವರ ಹಿಂದಿನ ಸೇವೆಯನ್ನು ಪರಿಗಣಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಡಾ:ಉದಯಕುಮರ್‌ಶೆಟ್ಟಿ ತಹಶೀಲ್ದಾರ್ ಇವರ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಶ್ರೀಯುತರ ಮೂಲ ಸೇವಾ ಪುಸ್ತಕದಲ್ಲಿ ದಾಖಲಿಸಿರುವಂತೆ ಇವರು ಈ ಹಿಂದೆ ಶಿಕ್ಷಣ ಇಲಾಖೆಯಲ್ಲಿ, ರಾಜ್ಯ ಶಾಸ್ತ್ರ ಉಪನ್ಯಾಸಕರಾಗಿ ಸಲ್ಲಿಸಿದ್ದ ಸೇವೆ ದಿನಾಂಕ: 19.08.1992 ರಿಂದ 27.04.2006ರವರೆಗೆ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಪ್ರಸ್ತುತ ಹುದ್ದೆಯ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಹಾಗೂ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯಗಳ ನಿಯಮ 41–ಎ ರ ಪ್ರಕಾರ ವೇತನ ನಿಗದಿಪಡಿಸಲು, ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 182 ಎಎಸ್‌ಡಿ 2007, ಬೆಂಗಳೂರು, ದಿನಾಂಕ: 25ನೇ ಮಾರ್ಚ್ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಡಾ:ಉದಯಕುಮಾರ್‌ಶೆಟ್ಟಿ, ತಹಶೀಲ್ದಾರ್, ಅಂಕೋಲಾ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ ಉಪನ್ಯಾಸಕರಾಗಿ ದಿನಾಂಕ: 19.08.1992 ರಿಂದ 27.04.2006ರವರೆಗೆ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ

ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಅವರ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಡಾ: ಉದಯಕುಮಾರ್ ಶೆಟ್ಟಿ ಇವರು ಈ ಹಿಂದೆ, ಉಪನ್ಯಾಸಕರು, ರಾಜ್ಯ ಶಾಸ್ತ್ರ (ಹಿರಿಯ ಶ್ರೇಣಿ) ರವರು ರಾಜ್ಯ ವೇತನ ಶ್ರೇಣಿಯಲ್ಲಿ ಹೊಂದಿರಬಹುದಾಗಿದ್ದ ವೇತನ ಶ್ರೇಣಿ ಮತ್ತು ಮಸ್ತಕದಲ್ಲಿ ತಹಶೀಲ್ದಾರರಾಗಿ ನೇಮಕ ಹೊಂದಿರುವ ಹುದ್ದೆಯ ವೇತನ ಶ್ರೇಣಿಗಳು ಸಮಾನ ವೇತನ ಶ್ರೇಣಿಗಳಾಗಿದ್ದು, ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 41–ಎ(ii) ರ ಉಪಬಂಧಗಳಂತೆ ದಿನಾಂಕ: 28.04.2006ರಂದು ಶ್ರೀಯುತರ ವೇತನದ ಹಂತ ರೂ.7,600/– ಪಡೆಯಬಹುದಾಗಿದ್ದು, ಈ ಹಿನ್ನೆಲೆಯಲ್ಲಿ, ತಹಶೀಲ್ದಾರ್ ಹುದ್ದೆಯಲ್ಲಿನ ಇವರ ವೇತನವನ್ನು ದಿನಾಂಕ: 28.04.2006ರಂದು ವೇತನ ಶ್ರೇಣಿ ರೂ.6,000–11,200 ರಲ್ಲಿ ವೇತನದ ಹಂತ ರೂ.7,600/– ರಲ್ಲಿ ವೇತನ ನಿಗದಿಗೊಳಿಸುವಂತೆ ಹಾಗೂ ದಿನಾಂಕ: 28.04.2006ರಲ್ಲಿ ಶ್ರೀಯುತರು ತಮ್ಮ ರಜೆ ಖಾತೆಯಲ್ಲಿ ಹೊಂದಿರಹುದಾದ ಜಮೆಯಲ್ಲಿದ್ದ ರಜೆಯನ್ನು ರಕ್ಷಣೆಯೊಂದಿಗೆ ಪ್ರಸ್ತುತ ಹುದ್ದೆಯಲ್ಲಿ ನಿಯಮ 20(ಎಫ್) ರಡಿಯಲ್ಲಿನ ಟಿಪ್ಪಣಿ 4 ರಲ್ಲಿನ ಅವಕಾಶದ ರೀತಿ ಪರಿಗಣಿಸುವಂತೆಯೂ ಸಹ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ–7) ರವರ ಟಿಪ್ಪಣಿ ಸಂ: ಆಇ 596 ವೆಚ್ಚ–7/2008, ದಿನಾಂಕ: 11.12.2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1011

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಎಂ.ಆರ್. ನಾಟೀಕಾರ, ಹಿಂದಿನ ತಹಶೀಲ್ದಾರ್, ಚಿತ್ತಾಪುರ ಮತ್ತಿತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ. 57 ಎಡಿಇ 2005, ದಿನಾಂಕ: 02.02.2007.
2. ಶ್ರೀ ಆರ್.ಎಂ. ನಾಟೀಕರ್, ತಹಶೀಲ್ದಾರ್ ಇವರ ಮನವಿ

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ತಾಲ್ಲೂಕು, ದೋಣ್ಣೂರು ಗ್ರಾಮದ ಸರ್ವೆ ನಂ: 16ರಲ್ಲಿ 10 ಎಕರೆ 19 ಗುಂಟೆ ಜಮೀನನ್ನು ಭೂ ನ್ಯಾಯ ಮಂಡಳಿಯ ವತಿಯಿಂದ ಶ್ರೀಮತಿ ಕಮಲಾಬಾಯಿ ಎಂಬುವರಿಗೆ ಮಂಜೂರಾಗಿದ್ದು, ಅದರಂತೆ ಅವರ ಹೆಸರಿನಲ್ಲಿ ಪಹಣೆ ಮತ್ತು ಅದರ ದಾಖಲೆಗಳನ್ನು ಹೊಂದಿದ್ದರೂ ಸಹ ಸೇಡಂ ಉಪವಿಭಾಗಾಧಿಕಾರಿಯವರ ಆದೇಶದಂತೆ ಈ ಜಮೀನಿನ ಮೊದಲನೇ ಮಾಲೀಕರಾದ ಶ್ರೀ ಅಣ್ಣಾರಾವ್ ತಂದೆ ಸದಾಶಿವಪ್ಪ ಎಂಬುವವರ ಹೆಸರಿಗೆ ಪಹಣಿ ಹಾಗೂ ಖಾತೆಯನ್ನು ಬದಲಾವಣೆ ಮಾಡಿರುತ್ತಾರೆಂಬ ಕಾರಣಕ್ಕಾಗಿ ಚಿತ್ತಾಪುರ ತಾಲ್ಲೂಕು ತಹಶೀಲ್ದಾರರಾದ ಶ್ರೀ ಆರ್.ಎಂ. ನಾಟೀಕಾರ, ಕಂದಾಯ ನಿರೀಕ್ಷಕರಾದ ಶ್ರೀ ಕಂತೆಪ್ಪ ಹಾಗೂ ಶ್ರೀ ಸುಭಾಷಚಂದ್ರ, ಗ್ರಾಮಲೆಕ್ಕಿಗ, ಇವರುಗಳ ಮೇಲೆ ಹೊರಿಸಿದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ಎಸ್.ಜಿ.ಪಲ್ಲೇದ, ನಿವೃತ್ತ ನ್ಯಾಯಾಧೀಶರು, ಗದಗ್, ಇವರ ಬದಲು ಶ್ರೀ ಪಿ.ಜಿ.ಕುಲಕರ್ಣಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೀದರ್ ಜಿಲ್ಲೆ ಇವರನ್ನು ಮೇಲೆ ಕ್ರ.ಸಂ. (1)ರ ದಿನಾಂಕ: 02.02.2007ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಶ್ರೀ ಪಿ.ಜಿ. ಕುಲಕರ್ಣಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು, ಇವರು ಪ್ರಸ್ತುತ ಮಹಾರಾಷ್ಟ್ರದ ಪುಣೆಯಲ್ಲಿ ವಾಸವಾಗಿರುವುದಾಗಿ ತಿಳಿದು ಬಂದಿದ್ದು, ಹಾಗೂ ಈ ಇಲಾಖಾ ವಿಚಾರಣೆ ಕಾರ್ಯ ನಿರ್ವಹಿಸಲು ಸಾಧ್ಯವಾಗದು ಎಂದು ಪತ್ರ ಬರೆದಿರುವುದಾಗಿ ತಿಳಿದು ಬಂದಿದ್ದರಿಂದ ಶ್ರೀ ಪಿ.ಜಿ. ಕುಲಕರ್ಣಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರ ಬದಲಿಗೆ ಬೇರೊಬ್ಬ ವಿಚಾರಣಾಧಿಕಾರಿಯನ್ನು ನೇಮಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್.ಡಿ. 57 ಎಡಿಇ 2005, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 13ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಪಿ.ಜಿ. ಕುಲಕರ್ಣಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಆಫೀಸ್ ಆಫ್ ಶ್ರೀ ವಿ.ಜಿ. ತಿವಾರಿ, ಅಡ್ವೋಕೇಟ್ ಭಾಲ್ಕಿ, ಬೀದರ್ ಜಿಲ್ಲೆ ಇವರ ಬದಲಿಗೆ ಶ್ರೀ ಎಸ್.ಎಸ್. ಪಾಟೀಲ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬಸವ ನಿಲಯ, ಬರೀದ ಬವಡಿ ಹತ್ತಿರ, ಅಕ್ಕಮಹಾದೇವಿ ಬೈಲೇನ್, ಬಿಜಾಪುರ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ ಹಾಗೂ ಮಂಡನಾಧಿಕಾರಿಯಾಗಿ ಗುಲ್ಬರ್ಗ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಯಕರನ್ನೇ ಮುಂದುವರೆಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಬೀದರ್ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗಧಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನಿ ಸಾಮಗ್ರಿಗಳನ್ನು ಜಿಲ್ಲಾಧಿಕಾರಿಗಳು ಬೀದರ್ ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರಿ ಆದೇಶ ಸಂ: ಸಿಆಸುಇ 2 ಸೇಇವಿ 2007, ದಿ:11.04.2008 ರನ್ವಯ ರೂ.8,000/– (ಎಂಟು ಸಾವಿರ ರೂಪಾಯಿಗಳು ಮಾತ್ರ) ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ.1,500/– (ಒಂದು ಸಾವಿರದ ಐದುನೂರು ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಜಿಲ್ಲಾಧಿಕಾರಿಗಳು, ಗುಲ್ಬರ್ಗ ಜಿಲ್ಲೆ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11 ಎ ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ, ಜರುಗಿಸಿ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1012

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3).

**ವಿಷಯ:** ಕೇಂದ್ರಸ್ಥಾನ ಸಹಾಯಕರ ಹುದ್ದೆಗಳನ್ನು ಅವುಗಳ ಮೂಲ ಸ್ಥಾನಗಳಿಗೆ ಸ್ಥಳಾಂತರಿಸುವ ಕುರಿತು– ಆದೇಶ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 52 ಮುನೋಸೇ(1) 2007 ದಿನಾಂಕ: 04.09.2007.
2. ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಇಎಸ್‌ಟಿ 2–136/2008–09, ದಿನಾಂಕ: 01.10.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ. (1)ರ ಅಧಿಸೂಚನೆಯಲ್ಲಿ ಈ ಕೆಳಕಂಡ ಕೇಂದ್ರಸ್ಥಾನ ಸಹಾಯಕರ ಹುದ್ದೆಗಳನ್ನು ಕೇಂದ್ರಸ್ಥಾನ ಉಪ ನೋಂದಣಾಧಿಕಾರಿಗಳೆಂದು ಸ್ಥಳಾಂತರಿಸಿ ಆದೇಶ ಮಾಡಲಾಗಿದೆ.

| ಕ್ರ. ಸಂ. | ಕೇಂದ್ರಸ್ಥಾನ ಉಪ ನೋಂದಣಾಧಿಕಾರಿಗಳ ಹುದ್ದೆ ಸ್ಥಳಾಂತರಗೊಂಡ ಉಪ ನೋಂದಣಿ ಕಛೇರಿ | ಕೇಂದ್ರಸ್ಥಾನ ಸಹಾಯಕರ ಹುದ್ದೆಯಾಗಿ ಸ್ಥಳಾಂತರಿಸಬೇಕಾದ ಜಿಲ್ಲಾ ನೋಂದಣಿ ಕಛೇರಿ |
|---|---|---|
| 1 | ಉಪ ನೋಂದಣಿ ಕಛೇರಿ ಹೆಸರಘಟ್ಟ (ಹೆಚ್ಚುವರಿ ಹುದ್ದೆ) | ಜಿಲ್ಲಾ ನೋಂದಣಿ ಕಛೇರಿ, ಬಿಜಾಪುರ |
| 2 | ಉಪ ನೋಂದಣಿ ಕಛೇರಿ, ಕೆಂಗೇರಿ | ಜಿಲ್ಲಾ ನೋಂದಣಿ ಕಛೇರಿ, ಹಾವೇರಿ |

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 52 ಮುನೋಸೇ (1) 2007 ದಿನಾಂಕ: 04.09.2007ರಲ್ಲಿ ಮೇಲ್ಕಂಡ ಕೇಂದ್ರಸ್ಥಾನ ಸಹಾಯಕರ ಹುದ್ದೆಗಳನ್ನು ಕೇಂದ್ರಸ್ಥಾನ ಉಪ ನೋಂದಣಾಧಿಕಾರಿಗಳೆಂದು ಸ್ಥಳಾಂತರಿಸಿ ಆದೇಶಿಸಲಾಗಿರುವ ಹುದ್ದೆಗಳನ್ನು ಅವುಗಳ ಮೂಲ ಸ್ಥಾನಗಳಾದ ಜಿಲ್ಲಾ ನೋಂದಣಿ ಕಛೇರಿ, ಬಿಜಾಪುರ ಜಿಲ್ಲೆ, ಬಿಜಾಪುರ ಮತ್ತು ಜಿಲ್ಲಾ ನೋಂದಣಿ ಕಛೇರಿ, ಹಾವೇರಿ ಜಿಲ್ಲೆ, ಹಾವೇರಿ ಇಲ್ಲಿಗೆ ಸ್ಥಳಾಂತರಿಸಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಮೇಲಿನ ವಿವರಗಳ ಹಿನ್ನೆಲೆಯಲ್ಲಿ, ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 2 ಮುನೋಸೇ 2008, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ಕೋರಿರುವಂತೆ ಕೇಂದ್ರಸ್ಥಾನ ಉಪ ನೋಂದಣಾಧಿಕಾರಿ, ಉಪ ನೋಂದಣಿ ಕಛೇರಿ, ಹೆಸರುಘಟ್ಟ, ಬೆಂಗಳೂರು (ಹೆಚ್ಚುವರಿ ಹುದ್ದೆ) ಈ ಹುದ್ದೆಯನ್ನು ಇದರ ಮೂಲ ಸ್ಥಾನವಾದ ಜಿಲ್ಲಾ ನೋಂದಣಿ ಕಛೇರಿ, ಬಿಜಾಪುರ ಜಿಲ್ಲೆ, ಬಿಜಾಪುರ ಇಲ್ಲಿನ ಕೇಂದ್ರಸ್ಥಾನ ಸಹಾಯಕರ ಹುದ್ದೆಗೆ ಮತ್ತು ಕೇಂದ್ರಸ್ಥಾನ ಉಪ ನೋಂದಣಾಧಿಕಾರಿ, ಉಪ ನೋಂದಣಿ ಕಛೇರಿ, ಕೆಂಗೇರಿ, ಬೆಂಗಳೂರು ಈ ಹುದ್ದೆಯನ್ನು ಇದರ ಮೂಲ ಸ್ಥಾನವಾದ ಜಿಲ್ಲಾ ನೋಂದಣಿ ಕಛೇರಿ, ಹಾವೇರಿ ಜಿಲ್ಲೆ, ಹಾವೇರಿ ಇಲ್ಲಿನ ಕೇಂದ್ರಸ್ಥಾನ ಸಹಾಯಕರ ಹುದ್ದೆಗೆ ಈ ಕೂಡಲೇ ಜಾರಿಗೆ ಬರುವಂತೆ ಸ್ಥಳಾಂತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1013

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ:ಸಿಐ:101:ಎಂಜಿಎಸ್:2008, ಬೆಂಗಳೂರು, ದಿನಾಂಕ: 25ನೇ ಮಾರ್ಚ್ 2009**

ದಿನಾಂಕ:16.02.2009ರ ಆದೇಶ ಸಂಖ್ಯೆ:ಸಿಐ 101 ಎಂಜಿಎಸ್ 2008ರ ಆದೇಶದ ಭಾಗದ 5ನೇ ಸಾಲಿನಲ್ಲಿರುವ "2008–09ನೇ ಸಾಲಿನ ಲೆಕ್ಕ ಶೀರ್ಷಿಕೆ:2853–02–102–0–01 (ಯೋಜನೆ) 051 ಸಾಮಾನ್ಯ ವೆಚ್ಚದಡಿ ಎಂಬುದನ್ನು," "2853–02–101–0–01 (ಯೋಜನೆ) ಉಪಶೀರ್ಷಿಕೆ–059 ಇತರೆ ಖರ್ಚು" ಎಂಬುದಾಗಿ ತಿದ್ದಿ ಓದಿಕೊಳ್ಳತಕ್ಕದ್ದು.

ಇನ್ನುಳಿದಂತೆ, ಸದರಿ ಆದೇಶದಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1014

**ಎ.ಪಿ. ರಾಮಕೃಷ್ಣ**

ಪೀಠಾಧಿಕಾರಿ (ಗಣಿ) ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಸಹಕಾರ ಸಚಿವಾಲಯ**

**ವಿಷಯ:** ಶ್ರೀ ಸಿದ್ದೇಶ್ವರ ಸಹಕಾರಿ ಬ್ಯಾಂಕ್ ನಿ, ವಿಜಾಪುರ ಇದರ ಆಡಳಿತಗಾರರ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಸಿ ಒ 133 ಸಿ ಎಲ್ ಎಂ 2008 ದಿನಾಂಕ: 14.08.2008.
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಯುಬಿಸಿ–1:117/ಎಸ್ಎಸ್ಎನ್/2006–07 ದಿನಾಂಕ: 12.01.2008, 12.02.2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದ ಶ್ರೀ ಸಿದ್ದೇಶ್ವರ ಸಹಕಾರಿ ಬ್ಯಾಂಕಿನ ಆಡಳಿತಗಾರರ ಅವಧಿಯನ್ನು ದಿನಾಂಕ:24.07.2008 ರಿಂದ 23.01.2009ರವರೆಗೆ ವಿಸ್ತರಿಸಲು ಅನುಮತಿಯನ್ನು ನೀಡಲಾಗಿದೆ. ಬ್ಯಾಂಕಿನ ಸದಸ್ಯರಿಗೆ ಗುರುತಿನ ಚೀಟಿಗಳನ್ನು ದಿನಾಂಕ:31.01.2009ರೊಳಗೆ ವಿತರಿಸುವ ನಿರೀಕ್ಷೆ ಇದ್ದು, ತದನಂತರ ಆಡಳಿತ ಸಮಿತಿಗೆ ಚುನಾವಣೆಯನ್ನು ನಿಗದಿಪಡಿಸಲು 45 ದಿನಗಳು ಬೇಕಾಗಿರುವುದರಿಂದ ದಿನಾಂಕ:24.01.2009 ರಿಂದ 6 ತಿಂಗಳ ಅವಧಿಗೆ ಆಡಳಿತಗಾರರ ಅವಧಿಯನ್ನು ವಿಸ್ತರಿಸಲು ಸಹಕಾರ ಸಂಘಗಳ ನಿಬಂಧಕರು, ಮೇಲೆ ಓದಲಾದ (2) ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಜಂಟಿ ನಿಬಂಧಕರ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 133 ಸಿಎಲ್ಎಂ 2008, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2009**

ಶ್ರೀ ಸಿದ್ದೇಶ್ವರ ಸಹಕಾರಿ ಬ್ಯಾಂಕಿನ ಆಡಳಿತಗಾರರ ಅವಧಿಯನ್ನು ದಿನಾಂಕ:24.01.2009 ರಿಂದ 23.07.2009 ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 21ರಡಿಯಲ್ಲಿ ಪ್ರದತ್ತವಾದಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 30(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಶ್ರೀ ಸಿದ್ದೇಶ್ವರ ಸಹಕಾರಿ ಬ್ಯಾಂಕ್ ಲಿ, ವಿಜಾಪುರ ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ, ಎಂದರೆ:–

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 30 ಉಪಪ್ರಕರಣ (1)ರಲ್ಲಿನ "ಒಂದು ವರ್ಷ" ಎಂಬ ಪದಗಳಿಗೆ ಬದಲಾಗಿ" ಇಪ್ಪತ್ತನಾಲ್ಕು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** 2) ಪ್ರಕರಣ 30 ಉಪ–ಪ್ರಕರಣ (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 23.07.2009 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 30 ಉಪ–ಪ್ರಕಣ (1)ರಲ್ಲಿನ ಉಪಬಂಧಗಳು ಪುನ: ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1015

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

**INFRASTRUCTURE DEVELOPMENT SECRETARIAT**

**Sub:** Release of Government of Karnataka's 50% balance share of the cost escalation towards Sholapur – Gadag railway gauge conversion project.

**Read:**
1. G.O. No. IDD 1 NSW 2003 dated 03.03.2003.
2. G.O. No. IDD 1 NSW 2003 dated 29.03.2003.
3. G.O. No. IDD 40 NSW 2003 dated 16.09.2003.
4. G.O. No. IDD 95 NSW 2003 dated 22.01.2004.
5. G.O. No. IDD 42 NSW 2004 dated 16.06.2004.
6. G.O. No. IDD 21 NSW 2005 dated 22.02.2005.
7. G.O. No. IDD 21 NSW 2005 dated 29.03.2005.
8. G.O. No. IDD 42 NSW 2004 (P) dated 22.07.2005.
9. G.O. No. IDD 42 NSW 2004 (P) dated 15.10.2005.
10. G.O. No. IDD 63 IDM 2005 dated 28.03.2006.
11. G.O. No. IDD 42 NSW 2004 dated 25.10.2006.
12. G.O. No. IDD 42 NSW 2004 dated 26.05.2007.
13. Letter No. W.63/B/CN/BNC.Genl dated 15.09.08 of CE (Con.,) SWR, Bangalore.

**Preamble:**

In the Government Orders read at Sl.No.(1) to (12) above Government of Karnataka have released their agreed 50% share of balance cost towards Sholapur-Gadag railway gauge conversion project amounting to Rs.117.36 crore.

2. The Chief Engineer (Con.,) South Western Railway, Bangalore in his letter read at Sl.No. (13) above, has requested to arrange to deposit the balance share of the cost escalation amount of Rs.49.97 Crores towards Sholapur-Gadag railway gauge conversion project.

3. Finance Department has concurred to release of Rs.10.00 crores only towards Sholapur-Gadage Gauge Conversion project from the Head of A/c "5465-01-190-3-05-211 (P) – New Cost sharing project – investments". Hence this Order.

**Government Order No. IDD 91 NSW 2007, Bangalore, Dated: 23rd March 2009**

After careful examination of the above, Government is pleased to release an amount of Rs.10.00 crore (Rupees ten crore) only towards Sholapur-Gadag Gauge Conversion railway project from the Head of Account 5465-01-190-3-05 (P) 211 – New Cost sharing project – investments.

3. The Chief Executive Officer, K-RIDE is authorized to draw the amount on a payee's receipt duly countersigned by the Under Secretary to Government, Infrastructure Development Department and K-RIDE shall in turn deposit the same with the Financial Advisor and Chief Accounts Officer (Construction), South Western Railway, Bangalore.

4. This order is issued in accordance with the concurrence of Finance Department given vide U.O.Note No.FD 310 Exp-I / 09 dated 23.03.2009.

By Order and in the name of Governor of Karnataka,

**N. MANJULA GEETHA**

P.R. 1016

Under Secretary to Government,

Infrastructure Development Department.

**PERSONNEL AND ADMINISTRATIVE REFORMS SECRETARIAT**

**CORRIGENDUM**

**No. DPAR 9 SDE 2009, Bangalore, Dated: 21st March 2009**

In Notification No. DPAR 4 SDE 2008 dated 18.07.2008, the words "Deputy Commissioner (Excise) at District level, the Joint Commissioner of Excise (Enforcement) at the Divisional level and the

Joint Commissioner (Enforcement and Intelligence) at the State level" shall be read as "Deputy Commissioner of Execise at District level, Joint Commissioner of Excise (Enforcement and Intelligence) at the Divisional level and Joint Commissioner of Excise (State Excise Intelligence Bureau) at the State level".

By Order and in the name of Governor of Karnataka,

**P. MARKANDEYA**

P.R. 1017

Under Secretary to Government,

Department of Personnel and Administrative Reforms (Service Rules-2).

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ಕೊಪ್ಪಳ ಜಿಲ್ಲೆ, ಗಂಗಾವತಿ ಸ್ಥಳೀಯ ಯೋಜನಾ ಪ್ರದೇಶಕ್ಕೆ ಮಹಾ ಯೋಜನೆ (ಪರಿಷ್ಕೃತ–1)ಗೆ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಯುಡಿ:ಟಿಟಿಪಿ:446 ದಿನಾಂಕ:04.02.1998.
2. ಸದಸ್ಯ ಕಾರ್ಯದರ್ಶಿಗಳು, ನಗರ ಯೋಜನಾ ಪ್ರಾಧಿಕಾರ, ಗಂಗಾವತಿ ಇವರ ಪತ್ರ ಸಂಖ್ಯೆ: ನಯೋಪ್ರಾಗಂ: ಮ.ಯೋ:2007–08:99, ದಿನಾಂಕ:28.03.2008.
3. ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಏಕ ಕಡತ ಸಂಖ್ಯೆ: ನಯೋ:ಉನಿ:(ಯೋವಿ):ಗಂಗಾವತಿ:ಮಯೋ(ಪ್ರ–1):2008–09 ದಿನಾಂಕ:30.01.2009 ರಲ್ಲಿ ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಕೊಪ್ಪಳ ಜಿಲ್ಲೆ, ಗಂಗಾವತಿ ಸ್ಥಳೀಯ ಯೋಜನಾ ಪ್ರದೇಶದ ಸ್ಥೂಲಾಭಿವೃದ್ಧಿ ಯೋಜನೆಗೆ ಅಂತಿಮ ಅನುಮೋದನೆಯನ್ನು ನೀಡಿ ಆದೇಶಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಗಂಗಾವತಿ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಯನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(ಡಿ) ರನ್ವಯ ಪರಿಷ್ಕರಿಸಿ, ಮಹಾ ಯೋಜನೆಗೆ (ಪರಿಷ್ಕೃತ–1) ನ್ನು ರೂಪಿಸಿ ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ಸಲ್ಲಿಸಿದೆ.

ಮೇಲೆ ಓದಲಾದ (3)ರ ಏಕ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು, ಗಂಗಾವತಿ ನಗರ ಯೋಜನಾ ಪ್ರದೇಶದ ಜನಸಂಖ್ಯೆಯು 2001ರ ಜನಗಣತಿಯಂತೆ 1,01,397 ಇದ್ದು, 2021ನೇ ಇಸವಿಗೆ 1,80,000 ಜನಸಂಖ್ಯೆ ಆಗಬಹುದೆಂದು ಅಂದಾಜಿಸಿ, ಮಹಾಯೋಜನೆ (ಪರಿಷ್ಕೃತ–1) (ತಾತ್ಕಾಲಿಕ)ಯನ್ನು ರೂಪಿಸಲಾಗಿದೆ. ಗಂಗಾವತಿ ಸ್ಥಳೀಯ ಯೋಜನಾ ಪ್ರದೇಶದ ವಿಸ್ತೀರ್ಣವು ಒಟ್ಟು 2671.04 ಹೆಕ್ಟೇರ್ ಇದ್ದು, 2021ನೇ ಇಸವಿಗೆ ನಗರೀಕರಣದ ಪ್ರದೇಶ (ಕನರ್‌ಬೇಷನ್ ಏರಿಯಾ) ದ ವಿಸ್ತೀರ್ಣವು ಒಟ್ಟು 1934.18 ಹೆಕ್ಟೇರ್‌ಗಳೆಂದು ಪ್ರಸ್ತಾಪಿಸಲಾಗಿದೆ. ಸದರಿ ಯೋಜನೆಯಲ್ಲಿ ವಸತಿಗಾಗಿ 1034.14 ಹೆಕ್ಟೇರ್ (ಶೇಕಡ 54.81), ವಾಣಿಜ್ಯಕ್ಕಾಗಿ 120.34 ಹೆಕ್ಟೇರ್ (ಶೇಕಡ 6.38), ಕೈಗಾರಿಕೆಗಾಗಿ 152.04 ಹೆಕ್ಟೇರ್ (ಶೇಕಡ 8.06), ಸಾರ್ವಜನಿಕ/ಅರೆ ಸಾರ್ವಜನಿಕ ವಲಯಕ್ಕೆ 96.51 ಹೆಕ್ಟೇರ್ (ಶೇಕಡ 512), ಉದ್ಯಾನವನ/ಬಯಲು ಜಾಗೆಗಳಿಗೆ 222.78 ಹೆಕ್ಟೇರ್ (ಶೇಕಡ 11.81), ನಾಗರೀಕ ಸೌಲಭ್ಯಕ್ಕಾಗಿ ಹೆಕ್ಟೇರ್ ಸಾರಿಗೆ ಮತ್ತು ಸಂಪರ್ಕ ವಲಯಕ್ಕೆ 261.056 ಹೆಕ್ಟೇರ್ (ಶೇಕಡ 13.82) ಪ್ರದೇಶವನ್ನು ನಿಗದಿಪಡಿಸಲಾಗಿದೆ. ಮಹಾ ಯೋಜನೆಯಲ್ಲಿ ಭವಿಷ್ಯದಲ್ಲಿ ಅಭಿವೃದ್ಧಿಗಾಗಿ ನಿಗದಿಪಡಿಸಿರುವ ವಿವಿಧ ಭೂ ಉಪಯೋಗ ಪ್ರಸ್ತಾವನೆಗಳನ್ನು ಹಾಲಿ ಅಭಿವೃದ್ಧಿಗಳಿಗೆ ಪೂರಕವಾಗಿ ಅಗತ್ಯಕ್ಕನುಗುಣವಾಗಿ ಪ್ರಮಾಣದಲ್ಲಿ ಅಳವಡಿಸಿದ್ದು, ಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದೆ. ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ (ತಿದ್ದುಪಡಿ) ಕಾಯ್ದೆ 2004ರ ಪ್ರಕರಣ 13(1) ರನ್ವಯ ತಾತ್ಕಾಲಿಕ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಈ ವಿಷಯವನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 33 ಗುಅಪ್ರಾ 2009, ಬೆಂಗಳೂರು, ದಿನಾಂಕ: 18ನೇ ಮಾರ್ಚ್ 2009**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆ, ಗಂಗಾವತಿ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆಗೆ (ಪರಿಷ್ಕೃತ–I) ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ (ತಿದ್ದುಪಡಿ) ಕಾಯ್ದೆ 2004ರ ಪ್ರಕರಣ 13(1) ರನ್ವಯ ಸರ್ಕಾರದ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

ಮಹಾ ಯೋಜನೆ (ಪರಿಷ್ಕೃತ–1) ಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1018

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.